# ಎರಡು ನುಡಿ

ಸುಪ್ರಸಿದ್ಧ ಅಮೇರಿಕನ್ ಲೇಖಕರಾದ ಜಾನ್ ಸ್ಟ್ಯಾಲಿನ-ಬೇಕರು 'ದ ಮೂನ ಈಜ್ ಡಾವುನ್' ಎಂಬುದನ್ನು ೧೯೪೨ರ ಸುಮಾರಕ್ಕೆ ಬರೆದರು. ಇದು ಸದ್ಯದ ಸಂಗ್ರಾಮವನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿಸಿದ ಚಿಕ್ಕ ಕಾದಂಬರಿ. ಕಾದಂಬರಿಯಲ್ಲಿ ಬರುವ ಹೆಸರುಗಳು ನಮಗೆ ಅಪರಿಚಿತವಾದರೂ ಅವುಗಳ ಉದ್ದೇಶವು ಸ್ಪಷ್ಟವಿದೆ. ಈ ಕಾದಂಬರಿಯ ಕತೆಯನ್ನೇ ಆಧಾರವಾಗಿಟ್ಟುಕೊಂಡು 'ಟ್ವೆಂಟಿಯುಥ್ ಸೆಂಚೆರಿ ಫ್ಯಾಕ್ಸ ಕಂಪನಿ'ಯವರು ಒಂದು ವಾಕ್ಚಿತ್ರವನ್ನೂ ತಯಾರಿಸಿರುವರು. ಯುದ್ಧ ಪ್ರಾರಂಭದಿಂದ ಇಂದಿನ ವರೆಗೆ ಪ್ರಕಟವಾದ— ಯುದ್ಧ ಭೂಮಿಯ ಹಿನ್ನೆಲೆಯುಳ್ಳ— ಕಾದಂಬರಿಗಳಲ್ಲಿ 'ದ ಮೂನ ಈಜ್ ಡಾವುನ್'ವು ಅಗ್ರಸ್ಥಾನವನ್ನು ಪಡೆದಿದೆ. 'ಸ್ವತಂತ್ರ ದೇಶವನ್ನು ಪಾಶವೀ ಶಕ್ತಿಯಿಂದ ಗೆದ್ದು ಚಿರಕಾಲದ ವರೆಗೆ ಅದನ್ನು ಗುಲಾಮಗಿರಿಯ ಶೃಂಖಲೆಗಳಿಂದ ಬಂಧಿಸಿಡುವುದು ಸಾಧ್ಯವಿಲ್ಲ.' ಎಂಬ ಸ್ಫೂರ್ತಿದಾಯಕ ತತ್ವವೇ ಈ ಕಾದಂಬರಿಯ ಜೀವಾಳ. ಮೂಲ ಕಾದಂಬರಿಯಲ್ಲಿಯ ಯಾವ ತತ್ವಕ್ಕೂ ವ್ಯತ್ಯಾಸ ಬರದಂತೆ ರೂಪಾಂತರಿಸಲಾಗಿದೆ. ಇದು ಕನ್ನಡ ವಾಚಕರಿಗೆ ರುಚಿಸುವುದೆಂದು ಭಾವಿಸುವೆನು.

—ಹೀರಾಸಿಂಗ

---

ಮುಂದಿನ ಪುಸ್ತಕ—

**ರತ್ನಹಾರ**

(ಪತ್ತೇದಾರಿ)

---

ಮುದ್ರಕರು: ಶ್ರೀ. ಎಂ. ಜಿ. ಪಾಲೇಕರ
ಹಿಂದಮಾತಾ ಮುದ್ರಣಾಲಯ, ಧಾರವಾಡ.
ಪ್ರಕಾಶಕರು: ಶ್ರೀ. ಬೆಳಗಾವಿ ರಾಮಚಂದ್ರರಾಯರು
ಮನೋರಂಜನ ಪ್ರಕಾಶನ ಸಮಿತಿ, ಧಾರವಾಡ.

# ಅಂತಿಮ ವಿಜಯ

## [೧]

ಹತ್ತೂವರೆ ಕಾಲು ಘಂಟೆಗೆ ಎಲ್ಲ ಕಾರ್ಯವನ್ನೂ ಮುಗಿಸಲಾಗಿತ್ತು ! ಊರನ್ನು ವಶಪಡಿಸಿಕೊಳ್ಳಲಾಗಿತ್ತು ! ಪ್ರತಿಕಾರ ಮಾಡುವವರ ಪರಾಭವಗೊಳಿಸಲಾಗಿತ್ತು ! ಆಕ್ರಮಣವನ್ನು ಮುಗಿಸಲಾಗಿತ್ತು ! ಈ ಚಿಕ್ಕ ಆಕ್ರಮಣದ ಪೂರ್ವ ಸಿದ್ಧತೆಯನ್ನೂ ಕೂಡ ಶತ್ರುಗಳು ಅತ್ಯಂತ ಜಾಗರೂಕತೆಯಿಂದ ಮಾಡಿದ್ದರು.

ರವಿವಾರ ಮುಂಜಾನೆ—ಆಕ್ರಮಣ ಪಾರಂಭವಾದಾಗ, ನಗರ ಸಂರಕ್ಷಕ ದಳದ ಸೈನಿಕರು ಮೊದಲು ತಮ್ಮ ತಮ್ಮ ಸ್ಥಳಗಳಲ್ಲಿಯೆ ಇದ್ದಿಲ್ಲ. ಒಟ್ಟು ಅವರು ೨೪ ಜನರಿದ್ದರು; ಆದರೆ ಅವರಲ್ಲಿ ಒಬ್ಬನ ಸುಳಿವೂ ಇಲ್ಲ. ದಾಳಿಯ ಸಮಯದಲ್ಲಿ, ಊರಿನಿಂದ ಎಂಟು ಮೈಲು ಅಂತರದ ಮೇಲಿರುವ ದಿನ್ನೆಯ ಕೆಳಗಿದ್ದರು ಆ ಸಂರಕ್ಷಕ ದಳದವರು. ಮಿ. ಕಾರೆಲ್ ಎಂಬ ಪ್ರಸಿದ್ಧ ಸ್ಥಳಿಕ ವ್ಯಾಪಾರಿಯು ಆ ದಿವಸ ಊರಿಂದ ಎಂಟು ಮೈಲು ದೂರವಿರುವ ದಿನ್ನೆಯ ಕೆಳಗೆ ಓಡುವ ಪಂದ್ಯಾಟವನ್ನು ಏರ್ಪಡಿಸಿದ್ದನು; ಮತ್ತು ವಿಜಯಿ ಹುರಿಯಾಳುಗಳಿಗೆ ದೊಡ್ಡ ಬಹುಮಾನ ಕೊಡುವುದನ್ನು ಪ್ರಕಟಿಸಿದ್ದನು. ಈ ಪಂದ್ಯಾಟದಲ್ಲಿ ಭಾಗವಹಿಸುವದಕ್ಕಾಗಿ ಆ ೨೪ ಜನ ಸಂರಕ್ಷಕ ದಳದವರು ಆ ದಿನ್ನೆಯ ಕೆಳಗೆ ಹೋಗಿದ್ದರು. ಶತ್ರು ವಿಮಾನಗಳ 'ಘರ ಘರ' ಸಪ್ಪಳ ಮತ್ತು ಅವುಗಳಿಂದ ಹೊರಬಿದ್ದು ತರಂಗ ತರಂಗವಾಗಿ ಇಳಿಯುತ್ತಿರುವ ಪ್ಯಾರಾಶೂಟ್ಸಗಳು ಆ ಸಂರಕ್ಷಕ ದಳದವರ ದೃಷ್ಟಿಗೆ ಬೀಳು

ತ್ತಲೇ ಅವರು ಅತಿಶಯ ವೇಗದಿಂದ ಧಾವಿಸುತ್ತ ಊರ ಕಡೆಗೆ ಬಂದರು; ಆದರೆ, ಯುದ್ಧ ದಾಳಿ-ಪ್ರತಿದಾಳಿ ಮತ್ತು ಜಯ-ಪರಾಜಯ ಇವಾವ ಸಂಗತಿಗಳೂ ಅವರಿಗೆ ಇನ್ನೂ ಗೊತ್ತಿದ್ದಿಲ್ಲ. ಅಂತೆಯೆ ಶತ್ರುಗಳು ಊರಲ್ಲಿಯ ಎಲ್ಲ ಮಾರ್ಗಗಳನ್ನು ಕತ್ತರಿಸಿದ್ದರೂ ಆ ಸಂರಕ್ಷಕ ದಳದವರು ಶತ್ರುಗಳ ಮೇಲೆ ತಮ್ಮ ಬಂದೂಕುಗಳನ್ನು ಎತ್ತಿದರು; ಆದರೆ ಯಾಂತ್ರಿಕ ತೋಪುಗಳ ಮುಂದೆ ಅವರು ಎಷ್ಟು ಹೊತ್ತು ಸಿಲ್ಲಬಲ್ಲರು ? ಕ್ಷಣದಲ್ಲಿ ೨೪ ಜನರಲ್ಲಿ ೧೨ ಜನರ ದೇಹಗಳು ಛಿನ್ನವಿಛಿನ್ನವಾದವು; ಏಳು ಜನರು ಘಾಯಗೊಂಡು ಬಿದ್ದುಬಿಟ್ಟರು; ಮತ್ತು ಉಳಿದ ಐದು ಜನರು ತಮ್ಮ ಆಯುಧ ಸಮೇತವಾಗಿ ಸಮೀಪದ ಅರಣ್ಯದ ಕಡೆಗೆ ಪಲಾಯನ ಮಾಡಿದರು.

ಹತ್ತೂವರೆ ಘಂಟೆಗೆ ಊರಿನ ಮುಖ್ಯ ಬೀದಿಯಲ್ಲಿ ಆಕ್ರಮಣಕಾರರ ವಿಜಯದದ್ಯೋತಕವಾಗಿ ಮೆರವಣಿಗೆಯು ಹೊರಟಿತ್ತು; ಬ್ಯಾಂಡಿನ ಸುಮಧುರನಾದವು ಎಲ್ಲೆಡೆಯಲ್ಲಿಯೂ ಕೇಳಿಸುತ್ತಿತ್ತು. ಕಣ್ಣು ಮುಂದೆ ನಡೆದಿರುವ ಈ ಭೀಷಣ ಘಟನೆಯ ನಿಜವಾದ ಅರ್ಥವು ಇನ್ನೂ ಪುರಜನರ ಲಕ್ಷ್ಯಕ್ಕೆ ಬಂದಿದ್ದಿಲ್ಲ. ಬಗಲಲ್ಲಿ ಮಶಿನಗನ್ನುಗಳನ್ನು ಹಿಡಿದುಕೊಂಡು, ತಲೆಗೆ ಶಿರಸ್ತ್ರಾವಣವನ್ನು ಹಾಕಿದ ಶತ್ರು ಸೈನಿಕರು ಮೆರವಣಿಗೆಯ ಮುಂದೆ ಹೊರಟದ್ದನ್ನು ಪುರಜನರು ಅವಕ್ಕಾಗಿ ನೋಡುತ್ತಿದ್ದರು.

ಹತ್ತೂನಲವತ್ತು ನಿಮಿಷಕ್ಕೆ ಮರಣಪಟ್ಟ ಹನ್ನೆರಡು ಜನ ಸಂರಕ್ಷಕ ದಳದವರ ಅಂತ್ಯಕ್ರಿಯೆಯನ್ನು ಮುಗಿಸಲಾಯಿತು. ಆನಂತರ ಪ್ಯಾರಾಶೂಟ್ಸಗಳನ್ನು ಸುತ್ತಿ ಇಟ್ಟು ಶತ್ರು ಸೈನಿಕರು ವಿಶ್ರಾಂತಿಗಾಗಿ ಮಿ. ಕ್ಯಾರೆಲ್‌ನ ಅಂಗಡಿಯ ಕಡೆಗೆ ಹೊರಟರು. ಅಲ್ಲಿ ಈ ಸೈನಿಕರಿಗಾಗಿ ಕ್ವಾಟ್ಸ, ಬ್ಲಾಂಕೇಟ್ಸ್ ಮೊದಲಾದ

ಆವಶ್ಯಕ ವಸ್ತುಗಳ ವ್ಯವಸ್ಥೆಯನ್ನು ಮೊದಲಿಗೇ ಸಿದ್ಧಪಡಿಸಲಾಗಿತ್ತು.

ಹತ್ತೂವರೆಯ ಮೇಲೆ ನಲ್ವತ್ತೈದು ನಿಮಿಷಕ್ಕೆ ಆ ಊರ ಮೇಯರ ಮಿ. ಆರ್ಡೆನ್ಸ್ ಅವರ ಕಡೆಗೆ ಶತ್ರುಗಳ ಕಡೆಯಿಂದ ಒಂದು ನಿರೋಪವನ್ನು ಕಳುಹಿಸಲಾಗಿತ್ತು. ಆ ನಿರೋಪದಲ್ಲಿ ಆಕ್ರಮಣ ಮಾಡುವ ದಳದ ಪ್ರಮುಖ ಅಧಿಕಾರಿ ಕರ್ನಲ್ ಲಾನ್ಸರರು ತಮ್ಮನ್ನು ಭೆಟ್ಟಿಯಾಗಲು ಅಪೇಕ್ಷಿಸುವರು ಎಂದು ಔಪಚಾರಿಕವಾಗಿ ವಿನಂತಿಯನ್ನು ಮಾಡಿಕೊಳ್ಳಲಾಗಿತ್ತು. ಈ ಭೆಟ್ಟಿಯು ಸರಿಯಾಗಿ ಹನ್ನೊಂದು ಘಂಟೆಗೆ ಮೇಯರ ಆರ್ಡೆನ್‌ರ ಬಂಗ್ಲೆದಲ್ಲಾಗುವುದು ನಿಶ್ಚಯಿಸಲಾಗಿತ್ತು. ಆದರೆ ನಿಶ್ಚಿತ ವೇಳೆಗಿಂತ ಮೊದಲೇ ಇಬ್ಬರು ಶತ್ರು ಸೈನಿಕರು ಮೇಯರ ಆರ್ಡೆನ್‌ರ ಬಂಗ್ಲೆಗೆ ಬಂದರು. ಅದರಲ್ಲಿ ಒಬ್ಬನ ಹೆಸರು ಕ್ಯಾಪ್ಟನ್ ಬೆಂಟಿಕ ಎಂದು. ಮತ್ತೊಬ್ಬನು ಅವನ ಸಹಾಯಕನಾದ ಸಾರ್ಜಂಟನಿದ್ದನು. "ಮೇಯರ ಆರ್ಡೆನ್‌ರ ಬಂಗ್ಲೆಯಲ್ಲಿ ಕೆಲವು ಬಂದೂಕುಗಳು ಇದ್ದದು ನಮಗೆ ತಿಳಿದಿದೆ; ಮತ್ತು ಅವುಗಳನ್ನು ವಶಪಡಿಸಿಕೊಳ್ಳಲು ನಾವು ಬಂದಿರುವೆವು" ಎಂದು ಕ್ಯಾಪ್ಟನ್ ಬೆಂಟಿಕನು ಹೇಳಿ, ಕೂಡಲೇ ತನ್ನ ಜೊತೆಗೆ ಬಂದಿದ್ದ ಸಾರ್ಜಂಟನಿಗೆ ಅವುಗಳನ್ನು ವಶಪಡಿಸಿಕೊಳ್ಳಲು ಅಪ್ಪಣೆ ಕೊಟ್ಟನು. ಈ ಎಲ್ಲ ಪ್ರಕಾರವನ್ನು ನೋಡಿ ಆಗ ಬಂಗ್ಲೆಯಲ್ಲಿ ಇದ್ದ ಡಾಕ್ಟರ ವಿಂಟರ—ಮೇಯರ ಆರ್ಡೆನ್‌ರ ಒಬ್ಬ ಆತ್ಮೀಯ ಮಿತ್ರ—ರಿಗೆ ವಿಲಕ್ಷಣ ವಿಸ್ಮಯವೆನಿಸಿತು.

"ನಿಮಗಂತೂ ಇಲ್ಲಿಯ ಎಲ್ಲ ಸುದ್ದಿಗಳು ತಿಳಿದಿವೆ ಕಾಣುತ್ತೆ?" ಎಂದು ಕ್ಯಾಪ್ಟನ್ ಬೆಂಟಿಕನಿಗೆ ಕೇಳಿದರು.

"ನಿಜ. ಆದರೆ ಅದರ ಎಲ್ಲ ಶ್ರೇಯಸ್ಸು ಇಲ್ಲಿಯ ನಮ್ಮ ಸ್ಥಾನಿಕ ಸಹಕಾರಿಗೆ ಸಲ್ಲತಕ್ಕದ್ದು. ಅವನು ಇಲ್ಲಿ ನಮಗಾಗಿ ಬಹಳ ದಿವಸ ದುಡಿದಿರುವನು."

"ಅವನ ಪರಿಚಯವನ್ನು ಕೊಡಬಹುದೆ? "

"ಪರಿಚಯ? ಆತನ ಇಲ್ಲಿಯ ಎಲ್ಲ ಕೆಲಸವು ಮುಗಿದೇ ಇದೆ. ಅವನ ಹೆಸರನ್ನು ಪ್ರಕಟಿಸಲು ಯಾವ ಅಭ್ಯಂತರವೂ ಇಲ್ಲ. ಅವನ ಹೆಸರು ಮಿ. ಕಾರೆಲ್"

" ಯಾರು ಜಾರ್ಜ ಕ್ಯಾರೆಲ್?" ಡಾಕ್ಟರ ವಿಂಟರರು ಆಶ್ಚರ್ಯದಿಂದ ಕೇಳಿದನು. "ಇದು ಹೇಗೆ ಶಕ್ಯವಿದೆ? ಈ ಊರಿಗಾಗಿ ಅವರು ಎಷ್ಟು ಉತ್ತಮ ಕಾರ್ಯಗಳನ್ನು ಮಾಡಿರುವರೆಂಬುದು ನಿಮಗೆ ಗೊತ್ತೆ? ಇಂದು ಮುಂಜಾನೆಯೆ ಅವರು ಇಲ್ಲಿ ಓಡುವ ಪಂದ್ಯಾಟವನ್ನು ಏರ್ಪಡಿಸಿ, ಸ್ವತಃ ಬಹುಮಾನವನ್ನು ಹಂಚಿರುವರು—ಅಂದರೆ ಈ ಪಂದ್ಯಾಟದ ತೆರೆಯ ಮರೆಯಲ್ಲಿ.... .. ....ಈಗ ಲಕ್ಷದಲ್ಲಿ ಬಂತು! ಅವರು ಏಕೆ ಊರಿನಿಂದ ಎಂಟು ಮೈಲು ಅಂತರದ ಮೇಲೆ ಈ ಪಂದ್ಯಾಟವನ್ನು ಏರ್ಪಡಿಸಿದ್ದರೆಂಬುದು, ತಿಳಿಯಿತು, ಆದರೆ...........ಆದರೆ ಜಾರ್ಜ ಕ್ಯಾರೆಲ್ ಇಂಥ ದೇಶದ್ರೋಹದ ಕಾರ್ಯವನ್ನು ಮಾಡಿರಬಹುದೆಂದು.... ಇನ್ನೂ ವಿಶ್ವಾಸವೆನಿಸುವುದಿಲ್ಲ. "

ಇಷ್ಟರಲ್ಲಿಯೆ ಬಂಗಲೆಯ ಝಡತಿಯು ಮುಗಿದಿತ್ತು. ಈ ಝಡತಿಯಲ್ಲಿ ಶತ್ರುವಿನ ಸಾರ್ಜಂಟನಿಗೆ ಕೇವಲ ಎರಡೇ ಬಂದೂಕುಗಳು ದೊರೆತಿದ್ದವು. ಒಂದು ಶಾಟಗನ್; ಮತ್ತೊಂದು ಬೇಟೆಯ ರಾಯಫಲ್. ಇವೆರಡೂ ಬಂದೂಕುಗಳನ್ನು ಸಾರ್ಜಂಟನ ಕೈಯಲ್ಲಿ ಕೊಟ್ಟು ಹೊರಡುತ್ತ ಕ್ಯಾಪ್ಟನ್ ಬೆಂಟಿಕನು ಮೇಯರ ಆರ್ಡರ್ನರಿಗೆ ಅಂದನು. "ಥ್ಯಾಂಕ ಯು. ನಾನು ಈಗ ಹೋಗುವೆನು. ನನ್ನ ಕೆಲಸವು ಪೂರ್ಣವಾಯಿತು. ಕರ್ನಲ್ ಲಾನ್ಸರರು ಇಷ್ಟರಲ್ಲಿಯೇ ಇಲ್ಲಿಗೆ ಬರಬಹುದು. ಗುಡ್‌ಮಾರ್ನಿಂಗ. "

ಸರಿಯಾಗಿ ಹನ್ನೊಂದು ಘಂಟೆಗೆ ಶತ್ರು ಪಡೆಯ ಮುಖ್ಯಸ್ಥರಾದ ಕರ್ನಲ್ ಲಾನ್ಸರರು ಮೇಯರ ಸಾಹೇಬರ ಬಂಗ್ಲೆಯಲ್ಲಿ ಆಗಮಿಸಿದರು. ಅವರ ಜೊತೆಗೆ ಮತ್ತೆ ಇಬ್ಬರು ಆಗಮಿಸಿದ್ದರು. ಅವರಲ್ಲಿ ಒಬ್ಬನ ಮೈಮೇಲೆ ಸೈನಿಕರ ಉಚ್ಚವೇಶ ವಸ್ತ್ರ ಧರಿಸಲಾಗಿತ್ತು. ಮತ್ತೊಬ್ಬನು ಕರಿ ಬಿಜಿನೆಸ್ ಸೂಟ ಧರಿಸಿದ್ದನು. ಈ ಎರಡನೆಯ ವ್ಯಕ್ತಿಯು ನೋಡಲು ಅತ್ಯಂತ ಕ್ಷೀಣವಾಗಿದ್ದು ಹಣೆಯು ವಿಶಾಲವಾದದ್ದೀತು. ಸ್ವತಃ ಕರ್ನಲ್ ಲಾನ್ಸರರು ಮಧ್ಯಮ ವಯಸ್ಕರಿದ್ದು, ಸುದೃಢರಿದ್ದರು. ಈಗ ಅವರು ಸ್ವಲ್ಪ ದಣಿದಂತೆ ಕಾಣುತ್ತಿದ್ದರು. ಅವರ ಅಂಗಾಂಗಗಳು ಸೈನಿಕರಿಗೆ ಶೋಭಿಸುವಂತೆ ದೃಷ್ಟಪುಷ್ಟವಾಗಿದ್ದವು. ಆದರೆ ಸರ್ವಸಾಧಾರಣ ಸೈನಿಕರಲ್ಲಿ ಕಂಡು ಬರುವ ನಿರ್ವಿಕಾರವು ಮಾತ್ರ ಅವರ ಕಣ್ಣುಗಳಲ್ಲಿ ಕಾಣಿಸುತ್ತಿದ್ದಿಲ್ಲ.

ಒಳಗೆ ಬಂದ ಕೂಡಲೇ ಕರ್ನಲ್ ಲಾನ್ಸರರು ಮೇಯರ ಆರ್ಡೆನರಿಗೂ ಅವರ ಪತ್ನಿಗೂ ನಮಸ್ಕಾರ ಮಾಡಿದರು; ಮತ್ತು ಡಾಕ್ಟರ ವಿಂಟರರ ಕಡೆಗೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಹತ್ತಿದರು.

ಕೂಡಲೇ ಮೇಯರ ಆರ್ಡೆನ್ನರು ಹೇಳಿದರು. "ಇವರು ಹೆಸರು ಡಾಕ್ಟರ ವಿಂಟರ"

"ಇವರು ಯಾವುದಾದರೂ ಅಧಿಕಾರದಲ್ಲಿರುವರೇನು ?"

"ಇಲ್ಲ. ಡಾಕ್ಟರರಿರುವರು ಇವರು. ಸ್ಥಳಿಕ ಇತಿಹಾಸಕಾರರೆಂಬೂ ಇಲ್ಲಿಯ ಜನರು ಇವರನ್ನು ಗುರುತಿಸುವರು."

ನಂತರ ಕರ್ನಲ್ ಲಾನ್ಸರರು ಡಾಕ್ಟರ ವಿಂಟರರಿಗೂ ಅಭಿವಾದನ ಮಾಡಿದರು. ತಮ್ಮ ಜೊತೆಗಿದ್ದ ಆ ಕ್ಷೀಣ ಮನುಷ್ಯನನ್ನು ತೋರಿಸುತ್ತ ಕರ್ನಲ್ ಲಾನ್ಸರರು ಮೇಯರ ಆರ್ಡೆನರರಿಗೆ ವಿಚಾರಿಸಿದರು.

"ಈ ಮಿಸ್ಟರ್ ಕಾರೆಲ್‌ರಿಗೆ ಗುರಿಸುತ್ತಿರಬಹುದಲ್ಲವೆ?"

"ಜಾರ್ಜ ಕಾರೆಲ್‌ರಿಗೆ? ವ್ಹಾ, ಅವರಿಗೆ ಚೆನ್ನಾಗಿ ಗುರಿಸುತ್ತೇನೆ. ಏನು ಜಾರ್ಜ ಹೇಗೆ ಸಾಗಿದೆ ವ್ಯವಹಾರ?" ಎಂದು ನಗುತ್ತ ಮೇಯರ ಸಾಹೇಬರು ಕೇಳಿದರು.

ಆದರೆ ಮಿ. ಕಾರೆಲ್ ಏನನ್ನೋ ಹೇಳಬೇಕೆನ್ನುವಷ್ಟರಲ್ಲಿಯೇ ಡಾಕ್ಟರ ವಿಂಟರ ಅಂದರು "ಮೇಯರ ಸಾಹೇಬ, ನಿಮ್ಮ ಮಿತ್ರ ಮಿ. ಕಾರೆಲ್ ಇವರು ಮೇಲೆ ಕಾಣುವಂತೆ ಸರಳ ಮನುಷ್ಯರಿಲ್ಲ. ಕರ್ನಲ್ ಸಾಹೇಬರ ಇಂದಿನ ವಿಜಯದ ಬಹುದಾಂಶ ಶ್ರೇಯಸ್ಸು ಮಿ. ಕಾರೆಲ್ ಅವರಿಗೆ ಇದೆ. ನಮ್ಮಲ್ಲಿ ಮಿತ್ರನೆಂದು ತಿರುಗಾಡುತ್ತ ನಮ್ಮ ವಿರುದ್ಧ ಆಗುವ ಈ ಆಕ್ರಮಣದ ಪೂರ್ವ ಸಿದ್ಧತೆಯನ್ನು ಇವರು ಕಳೆದ ಎಷ್ಟೋ ದಿವಸದಿಂದ ಮಾಡುತ್ತಿದ್ದರು. ಓಡುವ ಪಂದ್ಯಾಟದ ನಿಮಿತ್ಯವಾಗಿ ಇಂದು ಮುಂಜಾನೆ ನಮ್ಮ ಇಲ್ಲಿಯ ಸಂರಕ್ಷಕ ದಳದವರನ್ನು ದೂರ ಅಡವಿಯಲ್ಲಿ ಇರುವಂತೆ ಮಾಡಿದವರು ಇವರೇ. ನಮ್ಮ ಊರಲ್ಲಿ ಯಾರ ಮನೆಯಲ್ಲಿ ಎಷ್ಟು ಆಯುಧಗಳಿವೆ ಎಂಬ ಪಟ್ಟಿಯನ್ನು ಇವರೇ ತಯಾರಿಸಿದರು. ಜಾರ್ಜ ಕಾರೆಲ್—ನಮ್ಮ ಮಿತ್ರ!" ಎಂದು ತಿರಸ್ಕಾರದಿಂದ ನೋಡಹತ್ತಿದರು.

ಇವೆಲ್ಲ ಸಂಗತಿಗಳನ್ನು ಕೇಳಿ ಮೇಯರ ಆರ್ಡೆನ್ ಇವರಿಗೆ ವಿಲಕ್ಷಣ ಆಶ್ಚರ್ಯವಾಯಿತು! ಡಾಕ್ಟರ ವಿಂಟರ ಮತ್ತು ಮಿ. ಕಾರೆಲ್ ಇವರಿಬ್ಬರ ಕಡೆಗೂ ತೀಕ್ಷ್ಣ ದೃಷ್ಟಿಯಿಂದ ನಿರೀಕ್ಷಿಸ ಹತ್ತಿದ್ದರು. ನಿರೀಕ್ಷಣೆಯಲ್ಲಿಯೆ ಎಷ್ಟೋ ಸಮಯ ಕಳೆದು ಹೋದನಂತರ ಅವರು ಕರ್ನಲ್ ಲಾನ್ಸರ ಕಡೆಗೆ ಹೊರಳಿ "ಈ ಗೃಹಸ್ಥನ ಸಮ್ಮುಖದಲ್ಲಿ ನಿಮ್ಮ ಸಂಗಡ ಚಕಾರ ಶಬ್ದವನ್ನೂ ಕೂಡ ಮಾತಾಡಲು ನನಗೆ ಇಚ್ಛೆ ಇಲ್ಲ." ಅಂದರು.

ಇದರಿಂದ ಮಿ. ಕಾರೆಲ್‌ನ ಮುಖದಲ್ಲಿ ಒಮ್ಮೆಲೆ ಬದಲಾವಣೆ ಯಾಯಿತು. ಒಮ್ಮೆ ಸಿಟ್ಟಿನಿಂದ ಮೇಯರ ಕಡೆಗೆ ನೋಡಿ, ತಕ್ಷಣ ಮಿ. ಕಾರೆಲ್‌ನು ಕೋಣೆಯಿಂದ ಹೊರಹೊರಟನು. ಮಿ. ಕಾರೆಲ್ ಹೋದನಂತರ ಕರ್ನಲ್ ಲಾನ್ಸರರು ಮೇಯರರಿಗೆ "ನಾನು ಸ್ವಲ್ಪ ಇಲ್ಲಿ ಕೂತುಕೊಳ್ಳಲಿಯಾ? ಬಹಳ ದಿವಸ ಗಳಿಂದ ನನಗೆ ವಿಶ್ರಾಂತಿ ದೊರೆತಿಲ್ಲ."

"ಅವಶ್ಯವಾಗಿ" ಮೇಯರ ಆರ್ಡೇನ್ಸ್ ಹೇಳಿದರು.

ಒಬ್ಬ ದಣಿದ ಮನುಷ್ಯನು ಕೂಡ್ರುವಂತೆ ಕುರ್ಚಿಯ ಮೇಲೆ ಕೂತನಂತರ ಕರ್ನಲ್ ಲಾನ್ಸರರು ಹೇಳಹತ್ತಿದರು. "ಮೇಯರ ಸಾಹೇಬರೆ, ಇಲ್ಲಿಯ ಜನ ಸಾಮಾನ್ಯರ ಜೊತೆಗೆ ಸಾಧ್ಯವಾ ದಷ್ಟು ಉತ್ತಮ ರೀತಿಯಿಂದ ನಡೆಯಲಪೇಕ್ಷಿಸುವೆವು. ನಾವು ನಿಮ್ಮ ಮೇಲೆ ಆಕ್ರಮಣ ಮಾಡಿರುವೆಂಬ ಎಲ್ಲ ಸಂಗತಿಯನ್ನು ಮರೆತುಬಿಟ್ಟು ಕೇವಲ ವ್ಯವಹಾರಿಕ ದೃಷ್ಟಿಯಿಂದ ಇವೆಲ್ಲವು ಗಳನ್ನು ನಾವು ವಿಚಾರಿಸುವಾ, ಇಲ್ಲಿಯ ಕಲ್ಲಿದ್ದಲಿಯ ಖಣಿ ಮತ್ತು ಕರಾವಳಿಯ ಮೀನಗಳು ನಮಗೆ ಬೇಕಾಗಿವೆ. ಇಲ್ಲಿಯ ಜನರಿಗೆ ಶಕ್ಯವಿದ್ದಷ್ಟು ತ್ರಾಸ ಕೊಡದೆ, ನಮಗೆ ನಮ್ಮ ಗುರಿ ಯನ್ನು ಸಾಧಿಸಬೇಕಾಗಿದೆ."

ಮೇಯರ ಆರ್ಡೆನ್ಸರು ಈ ಮಾತಿನ ಕಡೆಗೆ ಲಕ್ಷ್ಯಕೊಡದೆ ಕರ್ನಲ್ ಲಾನ್ಸರರನ್ನು ಕೇಳಿದರು. "ನನ್ನ ದೇಶದಲ್ಲಿಯ ಬೇರೆ ಸ್ಥಳಗಳ ವಿಚಾರವೇನಾಗಿದೆ? ನನಗೆ ಇನ್ನೂ ಯಾವ ವಿಚಾ ರವೂ ತಿಳಿದಿಲ್ಲ!"

"ನಿಮ್ಮ ಇಡೀ ದೇಶವನ್ನು ನಾವು ನಮ್ಮ ವಶಕ್ಕೆ ತೆಗೆದು ಕೊಂಡಿರುವೆವು. ಈ ದಾಳಿಯ ಯೋಜನೆಯನ್ನು ನಾವು ಬಹಳ ಉತ್ತಮ ರೀತಿಯಿಂದ ಸಿದ್ಧ ಮಾಡಿದ್ದೆವು."

"ಆದರೆ ಒಂದೂ ಸ್ಥಳದಲ್ಲಿ ನಿಮಗೆ ಪ್ರತಿಕಾರವಾಗಲಿಲ್ಲವೆ?

"ಪ್ರತಿಕಾರವಾಗದಿದ್ದರೆ ಬಹಳ ಒಳ್ಳೆಯದಾಗುತ್ತಿತ್ತು. ನಿಷ್ಕಾರಣ ರಕ್ತಪಾತವಾಯಿತು. ಅತ್ಯಂತ ಜಾಗರೂಕತೆಯಿಂದ ನಾವು ಈ ದಾಳಿಯ ರೂಪರೇಷೆಗಳನ್ನು ತಯಾರಿಸಿದ್ದೆವು."

ಮೇಯರ ಆರ್ಡೆನ್ಸರು ತಮ್ಮ ಮುದ್ದೆಯನ್ನು ಬಿಡದೆ ಪುನಃ ಪ್ರಶ್ನಿಸಿದರು. "ಅಂದರೆ, ಜನರು ಪ್ರತಿಕಾರ ಮಾಡಿವರೆ?"

"ಅಹುದು. ಆದರೆ ನನ್ನ ದೃಷ್ಟಿಯಿಂದ ಅದು ಮೂರ್ಖತನ ಮತ್ತು ಕರುಣಾಜನಕವಾಗಿತ್ತು. ಪ್ರತಿಕಾರ ಮಾಡುವವರನ್ನು ನಾವು ಆಗಲೇ ಗೊತ್ತಿಗೆ ಹಚ್ಚಿರುವೆವು. ಒಟ್ಟಿನಲ್ಲಿ ಈಗ ಜನರು ಶಾಂತರಾಗಿರುವರು."

"ಅದರ ಕಾರಣವು ಸ್ಪಷ್ಟವಿದೆ; ಇನ್ನೂ ಇದು ಸರಿಯಾಗಿ ಜನರಿಗೆ ತಿಳಿದಿಲ್ಲ."

"ಆದರೆ, ಈಗ ಸ್ವಲ್ಪ ಸ್ವಲ್ಪವಾಗಿ ಜನರಿಗೆ ತಿಳಿಯಹತ್ತಿದೆ. ಮತ್ತೊಮ್ಮೆ ಅವರು ಇಂಥ ಮೂರ್ಖತನವನ್ನು ಎಂದಿಗೂ ಮಾಡಲಾರರು. ಅದು ಹೋಗಲಿ. ಇನ್ನು ನಮ್ಮ ಕೆಲಸದ ಕಡೆಗೆ ಹೊರಳೋಣ. ಇಲ್ಲಿಯ ಕಲ್ಲಿದ್ದಲಿಯನ್ನು ಖಣಿಯಿಂದ ಹೊರಗೆ ತೆಗೆದು, ಅದನ್ನು ಹಡಗದ ಮೂಲಕ ಕಳುಹಿಸಬೇಕಾಗಿದೆ. ಈ ಕೆಲಸಕ್ಕಾಗಿ ನಮ್ಮ ಜೊತೆಗೆ ನಮ್ಮ ಯಂತ್ರವಿಶಾರದವರನ್ನೂ ತಂದಿರುವೆವು. ಆದರೆ ಖಣಿಯಿಂದ ಕಲ್ಲಿದ್ದಲಿಯನ್ನು ಹೊರಗೆ ತೆಗೆಯುವುದನ್ನು ಮಾತ್ರ ಮೊದಲಿನಂತೆ ಇಲ್ಲಿಯ ಸ್ಥಳಿಕ ಕೆಲಸಗಾರರಿಗೇ ಒಪ್ಪಿಸತಕ್ಕವರಿದ್ದೇವೆ. ನಾನು ಹೇಳುತ್ತಿರುವುದು ಸರಿಯಾಗಿ ತಿಳಿಯಿತಲ್ಲವೆ?"

"ಅಹುದು, ತಿಳಿಯಿತು. ಆದರೆ ಹೀಗೆ ತಿಳಿಯಿರಿ ಇಲ್ಲಿಯ ನಮ್ಮ ಕೆಲಸಗಾರರಿಗೆ ಖಣಿಯಲ್ಲಿ ಕೆಲಸ ಮಾಡುವುದು ಬೇಡಾಗಿದ್ದರೆ?"

' ಅವರಿಗೆ ಕೆಲಸ ಮಾಡಲೇಬೇಕಾಗುವುದು. ಯಾಕೆಂದರೆ ನಮಗೆ ಇಲ್ಲಿಯ ಕಲ್ಲಿದ್ದಲಿ ದೊರಕಲೇಬೇಕಾಗಿದೆ.''

"ಆದರೆ, ಅವರು ಕೆಲಸ ಮಾಡಲು ಒಪ್ಪದಿದ್ದರೆ?"

"ಛೆ! ಛೆ! ಅವರಿಗೆ ಕೆಲಸ ಮಾಡಲೇಬೇಕು. ಇಲ್ಲಿಯ ಎಲ್ಲ ಜನರು ಒಟ್ಟಿನಲ್ಲಿ ಶಾಂತಿಪ್ರಿಯ ಮತ್ತು ಸಂಭಾವಿತರಿರುತ್ತಾರೆ. ವಿನಾಕಾರಣ ಜಗಳ ತೆಗೆದು ಬಡಿದಾಡುವ ಅಪೇಕ್ಷೆಯು ಕಾಲ ತ್ರಯದಲ್ಲಿಯೂ ಅವರಿಗೆ ಒಪ್ಪಲಾರದು. ಅಲ್ಲವೇ?''

"ಅದು ನನಗೆ ಗೊತ್ತಿದೆ. ಸ್ವತಂತ್ರ ರಾಜ್ಯದಲ್ಲಿ ನಮ್ಮ ಜನರು ಶಾಂತತೆಯಿಂದ ಮತ್ತು ಕಾಯಿದೆಗನುಕೂಲರಾಗಿ ನಡೆಯುತ್ತಿದ್ದು ದೇನೋ ನಿಜ. ಆದರೆ ನಿಮ್ಮ ಸತ್ತೆಯ ಕೆಳಗೆ ಅವರು ಹೇಗೆ ನಡೆದುಕೊಳ್ಳಬಹುದೆಂಬುದನ್ನು ಮಾತ್ರ ನಾನು ಹೇಳಲಾರೆ.''

ಕರ್ನಲ್ ಲಾನ್ಸರರು ಗಡಬಿಡಿಯಿಂದ ಹೇಳಿದರು. "ಆದರೆ ನಾವು ನಿಮ್ಮ ಸರಕಾರವನ್ನು ಮೊದಲಿನಂತೆಯೆ ಅಸ್ತಿತ್ವದಲ್ಲಿಡು ವೆವು. ನಿಮ್ಮ ಅಧಿಕಾರವನ್ನೂ ಕೂಡ ನಾವು ತೆಗೆದುಕೊಳ್ಳುವು ದಿಲ್ಲ. ನೀವೇ ಇಲ್ಲಿಯ ಮೇಯರರೆಂದು ಕೆಲಸ ಮಾಡುವವರು. ಜನರ ಮೇಲೆ ಅಧಿಕಾರ ನಡಿಸುವುದು, ಅವರಿಗೆ ಶಿಕ್ಷೆ ಅಥವಾ ಬಹುಮಾನವನ್ನು ಕೊಡುವ ಈ ಎಲ್ಲ ಅಧಿಕಾರವನ್ನು ನಾವು ನಿಮ್ಮ ಕಡೆಗೆ ಒಪ್ಪಿಸುವವರಿದ್ದೇವೆ. ಆಗ ಮಾತ್ರ ನಿಮ್ಮ ಜನರು ಯಾವ ತರಹದಿಂದಲೂ ತೊಂದರೆ ಕೊಡಲಾರರಲ್ಲವೇ?"

ಇಲ್ಲಿ ನೋಡಿ. ಕರ್ನಲ್ ಸಾಹೇಬರೇ, ಇಲ್ಲಿಯ ಜನರೊಳಗಿನವರು ನಾನೊಬ್ಬನಿದ್ದರೂ ಜನತೆಯು ಏನು ಮಾಡ ಬಹುದು, ಹೇಗೆ ನಡೆದುಕೊಳ್ಳಬಹುದು ಎಂಬುದನ್ನು ನನಗೆ ಹೇಳಲು ಬರುವುದಿಲ್ಲ. ಈ ವಿಷಯದಲ್ಲಿ ನನಗಿಂತೂ ನಿಮಗೇ ಹೆಚ್ಚಿಗೆ ತಿಳಿಯುವ ಸಂಭವವಿದೆ. ಕೆಲಕೆಲವು ಜನರು ನಿಯ

ಮಿಸಿದ ಮುಂದಾಳುಗಳ ಆಜ್ಞೆಯನ್ನು ಯಾವ ಆಕ್ಷೇಪಣೆಯೂ ಇಲ್ಲದೆ ಪಾಲಿಸುವರು. ನನ್ನನ್ನೇನೂ ಮೇಲಿನಿಂದ ನಿಯಮಿಸಲಾಗಿಲ್ಲ. ಜನರು ನನ್ನನ್ನು 'ಮೇಯರ'ಯೆಂದು ಆರಿಸಿ ಈ ಅಧಿಕಾರವನ್ನು ಕೊಟ್ಟಿರುವರು; ಮತ್ತು ಈ ಅಧಿಕಾರ ಪದದಿಂದ ನನ್ನನ್ನು ಸಹಜವಾಗಿ ಕಿತ್ತೊಗೆಯಬಹುದು. ಹೀಗಾಗಲಾರದೆಂದು ಯಾರು ಹೇಳಬಲ್ಲರು ? ನಾನು ನಿಮಗೆ ಕೂಡಿಕೊಂಡೆನೆಂದು ಜನರಿಗೆ ವಿಶ್ವಸನೀಯವಾಗಿ ತಿಳಿದು ಬಂದರೆ 'ದೇಶದ್ರೋಹಿ' ಎಂದು ನಿಜವಾಗಿಯೂ ಜನರು ನನ್ನನ್ನು ಮೇಯರ ಪದವಿಯಿಂದ ತೆಗೆದು ಹಾಕುವರು! ”

"ಜನರಿಗೆ ಶಾಂತತೆಯಿಂದ ಇರಲು ಹೇಳಿದರೆ, ಒಂದು ಪ್ರಕಾರದಿಂದ ಜನತೆಯ ಕಲ್ಯಾಣ ಮಾಡಿದಂತಾಗುವುದಿಲ್ಲವೆ? ''

" ಅದು ಹೇಗೆ ? ''

" ಜನರಿಗೆ ಯಾವ ತರಹದಿಂದಲೂ ಹಾನಿಯಾಗದಂತೆ ಮುಂಜಾಗ್ರತೆಯನ್ನು ವಹಿಸಿ ಅವರ ಸಂರಕ್ಷಣೆ ಮಾಡುವುದು ನಿಮ್ಮ ಕರ್ತವ್ಯ. ನಮಗೆ ಇಲ್ಲಿಯ ಕಲ್ಲಿದ್ದಲಿ ಸಿಗಲೇಬೇಕೆಂಬುದನ್ನು ನಾನು ನಿಮಗೆ ಮೊದಲೇ ತಿಳಿಸಿರುವೆನು. ಅದನ್ನು ಹೇಗೆ ದೊರಕಿಸಬೇಕೆಂಬುದನ್ನು ನಮ್ಮ ಮುಂದಾಳುಗಳು ನಮಗೆ ಎಂದೂ ತಿಳಿಸುವುದಿಲ್ಲ. ಕೇವಲ ಆಜ್ಞೆ ಮಾಡುವದಷ್ಟೇ ಅವರಿಗೆ ಗೊತ್ತು ! ನೀವು ನಿಮ್ಮ ಜನರಿಗೆ ಶಾಂತರೀತಿಯಿಂದ ಕೆಲಸ ಮಾಡಲು ಹೇಳಿರಿ. ಇಷ್ಟು ನೀವು ಮಾಡಿದರೆ ಅವರ ಸುರಕ್ಷಿತತೆಯ ಬಗ್ಗೆ ಚಿಂತಿಸುವ ಕಾರಣವಿಲ್ಲ. ”

ಕರ್ನಲ್ ಲಾನ್ಸರ ಮಾತು ಮುಗಿದ ನಂತರ ಮೇಯರರು ಕೇಳಿದರು. '' ಜನರಿಗೆ ಸುರಕ್ಷಿತತೆ ಬೇಡವಾಗಿದ್ದರೆ? ”

" ಅಂದನಂತರ ಹೇಗೆ ವರ್ತಿಸಬೇಕೆಂಬುದನ್ನು ನೀವೇ ವಿಚಾರ ಮಾಡಿ ನಿಶ್ಚಯಿಸಿ. ”

“ ಆದರೆ, ನಮ್ಮಲ್ಲಿಯ ಜನರಿಗೆ ತಮಗಾಗಿ ಎರಡನೆಯವರು ವಿಚಾರ ಮಾಡುವುದು ಸರಿಬರುವುದಿಲ್ಲ. ನಮ್ಮ ಜನರು ನಿಮ್ಮ ಜನರಿಗಿಂತ ತೀರ ಭಿನ್ನವಾಗಿರುವರು. ”

“ಅದು ಹೋಗಲಿ!” ನಡುವೆಯೆ ಕರ್ನಲ್ ಲಾನ್ಸರರು ಹೇಳಿದರು. “ ನನಗೆ ಮತ್ತೊಂದು ಮಾತನ್ನು ನಿಮಗೆ ಕೇಳಬೇಕಾಗಿದೆ. ನನ್ನ ಜೊತೆಗಿರುವ ನಾಲ್ಕೈದು ಅಧಿಕಾರಿಗಳಿಗೂ ನನಗೂ ನಿಮ್ಮ ಬಂಗ್ಲೆಯಲ್ಲಿ ವಾಸಿಸಲು ಅನುಕೂಲವಾಗಬಹುದೆ ? ”

ಆನಂತರ ಮೇಯರ ಆರ್ಡೆನ್ಸರು ಸ್ವಲ್ಪ ಹೊತ್ತು ವಿಚಾರ ಮಾಡಿ ಹೇಳಿದರು. “ ಈ ಸ್ಥಳವು ಬಹಳ ಚಿಕ್ಕದಿದೆ. ಊರಲ್ಲಿ ಇದಕ್ಕೂ ಎಷ್ಟೋ ಪಾಲು ದೊಡ್ಡ ಮತ್ತು ಸೌಕರ್ಯವುಳ್ಳ ಬಂಗ್ಲೆಗಳು ದೊರಕಬಹುದು. ”

“ ಹಾಗಲ್ಲ. ” ಕರ್ನಲ್ ಲಾನ್ಸರರು ಹೇಳಹತ್ತಿದರು. ಸ್ಥಳ ಸಂಕೋಚದ ಪ್ರಶ್ನೆ ಇಲ್ಲ. ಒಟ್ಟಿನಲ್ಲಿ ಶಾಂತತೆ ಮತ್ತು ಸುರಕ್ಷಿತತೆಯ ದೃಷ್ಟಿಯಿಂದ ವಿಚಾರಿಸಿದರೆ ಸ್ಥಳಿಕ ಅಧಿಕಾರಿಗಳ ಆಶ್ರಮದಲ್ಲಿ ಇರುವುದು ಹೆಚ್ಚು ಲಾಭದಾಯಕವೆಂದು ಅನೇಕ ಸಲ ಅನುಭವ ಬಂದಿದೆ. ”

“ ಇದರಿಂದ ಶತ್ರುಗಳ ಮತ್ತು ಸ್ಥಳಿಕ ಅಧಿಕಾರಿಗಳ ಒಮ್ಮತವಾಗಿದೆಯೆಂದು ಜನರ ತಿಳುವಳಿಕೆಯಾಗುವುದು. ಅಲ್ಲವೇ? ”

“ ಅಹುದು. ”

‘ ನಾನು ನಿಮ್ಮ ಈ ವಿನಂತಿಯನ್ನು ಪುರಸ್ಕರಿಸದಿದ್ದರೆ? ”

“ ಇಲ್ಲ. ” ಕರ್ನಲ್ ಲಾನ್ಸರರು ಕೂಡಲೆ ಉತ್ತರ ಕೊಟ್ಟರು. “ ಇದು ವಿನಂತಿಯಲ್ಲ. ಆಜ್ಞೆ! ”

" ಆದರೆ, ನೀವು ನನ್ನ ಬಂಗ್ಲೆದಲ್ಲಿ ವಾಸವಮಾಡಹತ್ತಿದರೆ, ಅದು ನಮ್ಮ ಜನರಿಗೆ ಸರಿದೋರಲಾರದು. "

" ಯಾವಾಗಲೂ ಜನರು, ಜನರು ! ಎಂದು ಎಷ್ಟು ಏರಿಸಿ ಕೂಡ್ರಿಸಿರುವಿರಿ ನೀವು ಅವರನ್ನು. ನಿಮ್ಮ ಎಲ್ಲ ಜನರನ್ನೂ ನಾವು ನಿಃಶಸ್ತ್ರಗೊಳಿಸಿರುವೆವು. ಈ ವಿಷಯದಲ್ಲಿ ಜನರಿಗೆ ಸ್ವಲ್ಪಾದರೂ ಮಾತನಾಡಲು ಅಧಿಕಾರವಿರುವುದಿಲ್ಲ. "

ಇದಕ್ಕೆ ಮೇಯರ ಆರ್ಡೆನ್ಸರು ನಕಾರಾತ್ಮಕ ತಲೆಯು ಅಲುಗಾಡಿಸಿದರು. " ಅದು ನಿಮಗೆ ಈಗಲೇ ತಿಳಿಯಲಾರದು " ಎಂದು ಸುಮ್ಮನಾದನು.

[೨]

ಕೊನೆಗೆ ಮೇಯರ ಸಾಹೇಬರ ಬಂಗ್ಲೆಯ ಮೇಲಿನ ಭಾಗದಲ್ಲಿಯೇ ಕರ್ನಲ್ ಲಾನ್ಸರರು ತಮ್ಮ ನಿವಾಸವನ್ನು ಮಾಡಿಕೊಂಡರು. ಅವರ ಜೊತೆಯಲ್ಲಿ ಮೇಜರ ಹಂಟರ, ಕ್ಯಾಪ್ಟನ್ ಬೆಂಟಿಕ ಕಾಪ್ಟನ್ ಲಾಫ್ಟ, ಲೆಫ್ಟನಂಟ ಪ್ರಕಲ್, ಲೆಫ್ಟನಂಟ ಟಾಡರ್ ಎಂದು ಮತ್ತೆ ಐದು ಜನ ಅಧಿಕಾರಿಗಳಿದ್ದರು. ಯುದ್ಧವೆಂದರೆ ಒಂದು ವಿನೋದದಾಟವೆಂದು ಈ ಅಧಿಕಾರಿಗಳ ತಿಳುವಳಿಕೆಯಾಗಿತ್ತು; ಮತ್ತು ಅದು ಅವರ ವಿಷಯದಲ್ಲಿ ಯಥಾಯೋಗ್ಯವೂ ಆಗಿತ್ತು. ಯಾಕಂದರೆ ಇಲ್ಲಿಯ ವರೆಗಿನ ಯಾವ ದಾಳಿಯಲ್ಲಿಯೂ ಅವರು ಪರಾಜಯವನ್ನು ಹೊಂದಿದ್ದಿಲ್ಲ; ಎಲ್ಲಿಯೂ ಹೇಳಿಕೊಳ್ಳುವಂಥ ಘಾಯವೂ ಆಗಿದ್ದಿಲ್ಲ. ಬಲಾಢ್ಯ ಶತ್ರುವನ್ನು ಕೂಡ ಪೂರ್ವ ಯೋಜನೆಯಂತೆ ನಿಃಶಸ್ತ್ರ ಮತ್ತು ಅಜಾಗರೂಕತೆಯ ಸಮಯವನ್ನರಿತು ಏರಿಹೋಗಿ ದೇಶವನ್ನು ವಶಪಡಿಸಿಕೊಳ್ಳುವದು ಅವರಿಗೆ ಸುಲಭವಾಗಿತ್ತು. ಈ ವರೆಗಿನ ಅವರ ಯುದ್ಧ ನೀತಿಯೂ ಇದೇ ಪ್ರಕಾರ ಸಾಗಿತ್ತು.

ಕರ್ನಲ್ ಲಾನ್ಸರರಿಗೊಬ್ಬರಿಗೆ ಮಾತ್ರ ಯುದ್ಧದ ಭೀಕರತೆಯ ನಿಜವಾದ ಅನುಭವವಿದ್ದಿತು. ಕಳೆದ ಮೂವತ್ತು ವರ್ಷಗಳ ಹಿಂದಿನ ಮಹಾಯುದ್ಧದಲ್ಲಿ ಕೆಲವು ದಿವಸ ಅವರು ಫ್ರಾನ್ಸ ಮತ್ತು ಬೆಲ್ಜಿಯಮುಗಳಲ್ಲಿ ಇದ್ದರು. ಅಲ್ಲಿ ಇದ್ದಾಗ ಅವರಿಗೆ ಯುದ್ಧ ವಿಷಯದಲ್ಲಿ ದೊರೆತ ಕಟು ಅನುಭವದ ಸ್ಮರಣೆಯನ್ನು ಕೂಡ ಮಾಡಲು ಅವರಿಗೆ ಅಸಹ್ಯವೆನಿಸುತ್ತಿತ್ತು. ವಿಶ್ವಾಸ ಘಾತ, ದ್ವೇಷ, ಅಸಮರ್ಥ ಸೇನಾಪತಿಯ ತಪ್ಪುಗಳು, ರಕ್ತಪಾತ ಮತ್ತು ಬೇನೆಬೇಸರಿಕೆಗಳೆಂದರೇನೆ ನಿಜವಾದ ಯುದ್ಧ ವೆಂಬುದು ಅವರಿಗೆ ತಿಳಿದಿತ್ತು.

ಆದರೆ ಅವರ ತರುಣ ಅಧಿಕಾರಿಗಳಿಗೆ ಮಾತ್ರ ಯುದ್ಧದ ನಿಜ ಸ್ವರೂಪವು ಇನ್ನೂ ತಿಳಿಯುತಕ್ಕದ್ದಿತ್ತು. ಅಂತೆಯೇ ಅವರು ಮೇಯರ ಸಾಹೇಬರ ಬಂಗ್ಲೆಯ ಮೇಲಿನ ಭಾಗದಲ್ಲಿ ಆ ಎಲ್ಲ ಜನರು ಆನಂದದಿಂದ ಹರಟೆ ಹೊಡೆಯುತ್ತ ಕುಳಿತಿದ್ದರು. ಕರ್ನಲ್ ಲಾನ್ಸರರು ಒಳಗೆ ಬಂದ ಕೂಡಲೇ ಎಲ್ಲರೂ ಎದ್ದು ಸೈನಿಕ ಪದ್ಧತಿಯ ನಮಸ್ಕಾರ ಮಾಡಿದರು. ಕರ್ನಲ್ ಸಾಹೇಬರು ಖುರ್ಚಿಯ ಮೇಲೆ ಕೂತನಂತರ ಲೆಫ್ಟನಂಟ ಪ್ರಕಲ್‌ರು ಕೇಳಿದರು. "ರಾಯರೆ! ಈ ಯುದ್ಧವು ಯಾವಾಗ ಮುಗಿಯುವುದೆಂದು ನಿಮಗನಿಸುವುದು ?"

"ಯುದ್ಧ ಮುಗಿಯುವುದು ! ನೀವು ಏನನ್ನುವಿರಿ ?"

"ಅಂದರೆ ನಮಗೆ ವಿಜಯ ದೊರೆಯಲು ಇನ್ನೂ ಎಷ್ಟು ಸಮಯ ಬೇಕು? "

ಇದಕ್ಕೆ ಕರ್ನಲ್ ಲಾನ್ಸರರು ತಮ್ಮ ತಲೆಯನ್ನು ಅಲುಗಾಡಿಸಿ, "ಅದು ನನಗೆ ಗೊತ್ತಿಲ್ಲ. ಜಗತ್ತಿನಲ್ಲಿ ಇನ್ನೂ ಶತ್ರುಗಳು ಜೀವಂತರಿರುವರು."

" ಕ್ರಿಸ್‌ಮಸ್‌ದ ಪೂರ್ವದಲ್ಲಿ ಎಲ್ಲೆಡೆಯಲ್ಲಿಯೂ ಶಾಂತತೆಯು ಪ್ರಸ್ಥಾಪಿತವಾದಲ್ಲಿ ನಮಗೆ ಊರಿಗೆ ಹೋಗಲು ರಜೆ ದೊರೆಯುವುದೇನು? "

" ಅದನ್ನೇನು ನನಗೆ ಹೇಳಲು ಬರುವುದಿಲ್ಲ. ಈ ವಿಷಯದಲ್ಲಿ ಎಲ್ಲ ಆಜ್ಞೆಗಳು ರಾಜಧಾನಿಯಿಂದ ಬರಬೇಕಾಗುತ್ತವೆ. ನಿಮಗೆ ಕ್ರಿಸ್‌ಮಸ್‌ದಲ್ಲಿ ಊರಿಗೆ ಹೋಗುವುದಿದೆ ಕಾಣುತ್ತೆ? "

" ಅಹುದು. ಅದು ನನ್ನ ಬಹಳ ದಿವಸದ ಅಪೇಕ್ಷೆ "

' ಒಳ್ಳೇದು. ನೋಡುವಾ. ನಿಮಗೆ ರಜೆ ಸಿಕ್ಕರೂ ಸಿಗಬಹುದು. "

ನಂತರ ಲೆಫ್ಟನಂಟ ಟಾಡರರು ಕೇಳಿದರು, ಯುದ್ಧ ಮುಗಿದ ನಂತರ ಮತ್ತೆ ನಾವು ಈ ದೇಶವನ್ನು ಬಿಟ್ಟು ಹೋಗಬೇಕೇನು? "

" ನನಗೆ ಗೊತ್ತಿಲ್ಲ. ಏಕೆ? "

" ಬಹಳ ಉತ್ತಮ ದೇಶವಿದೆ. ಇಲ್ಲಿಯ ಜನರೂ ಸಜ್ಜನರಿರುವರು. ನಮ್ಮಲ್ಲಿಯ ಕೆಲವು ಜನರು ಇಲ್ಲಿಯೇ ವಾಸಿಸಬೇಕೆಂದು ಮನಃಪೂರ್ವಕವಾಗಿ ಅಪೇಕ್ಷಿಸುತ್ತಾರೆ.

" ಹೀಗೇನು? " ಕರ್ನಲ್ ಲಾನ್ಸರರು ಚೇಷ್ಟೆಯ ಸ್ವರದಲ್ಲಿ ಕೇಳಿದರು. " ನಿಮ್ಮ ಮನಮೆಚ್ಚುವ ಒಂದು ಸ್ಥಳವನ್ನೂ ನೀವು ಶೋಧಿಸಿಟ್ಟಂತೆ ತೋರುತ್ತದೆ? "

" ಇಲ್ಲಿಯ ಕೆಲಕೆಲವು ಹೊಲಗಳು ಬಹಳ ಉತ್ತಮವಿದೆ. ಅವುಗಳಲ್ಲಿಯ ನಾಲ್ಕಾರು ತುಕ್ಕಡಿಗಳನ್ನು ಕೂಡಿಸಿ ಒಂದು ಮಾಡಿ ಅಲ್ಲಿ ಖಾಯಂ ವಸತಿಯನ್ನು ಮಾಡಲು ಬಹಳ ಅನುಕೂಲವಾಗುವುದು. "

" ನಿಮ್ಮ ಒಡೆತನದ ಯಾವ ಹೊಲಗಳೂ ಇದ್ದಂತೆ ಕಾಣು ವುದಿಲ್ಲ? "

" ಈಗ ಇಲ್ಲ. ಮೊದಲಿಗೆ ಎರಡು ಹೊಲಗಳಿದ್ದವು. ಆದರೆ 'ಇನಫ್ಲೇಶನ'ದಲ್ಲಿ ಅವುಗಳನ್ನು ಕಸಿದುಕೊಳಲಾಯಿತು. "

ಅಷ್ಟರಲ್ಲಿಯೇ ಒಬ್ಬ ಕಾವಲುಗಾರ ಸೈನಿಕನು ಬಾಗಿಲವನ್ನು ತೆರೆದು ಒಳಗೆ ಬಂದು " ಮಿಸ್ಟರ್ ಕಾರೆಲ್ ನಿಮ್ಮನ್ನು ಭೆಟ್ಟಿ ಯಾಗಲು ಬಂದಿರುವರು. " ಎಂದು ಕರ್ನಲ್ ಲಾನ್ಸರರನ್ನು ಉದ್ದೇಶಿಸಿ ಹೇಳಿದನು.

" ಅವರನ್ನು ಒಳಗೆ ಕಳುಹಿಸು "

ಸ್ವಲ್ಪ ಸಮಯದಲ್ಲಿಯೇ ಕೈಗಳನ್ನು ಒಂದರಮೇಲೊಂದು ತಿಕ್ಕುತ್ತ ಮಿ. ಕ್ಯಾರೆಲ್‌ರು ಒಳಗೆ ಬಂದರು. ಇನ್ನೂ ಅವರ ಮೈಮೇಲೆ ಮೊದಲಿನ ಕರಿಯ ಬಿಜಿನೆಸ್ ಸೂಟೇ ಇತ್ತು. ಅವರ ಹಣೆಗೆ ಮಾತ್ರ ಇಂದು ಬ್ಯಾಂಡೇಜ ಕಟ್ಟಿದ್ದಿತ್ತು. " ಇಷ್ಟರ ಲ್ಲಿಯೇ ಜನರು ನಿಮ್ಮ ಕೊಲೆ ಮಾಡಲು ಪ್ರಯತ್ನಿಸಿದಂತೆ ಕಾಣುತ್ತದೆ?" ಎಂದು ಕರ್ನಲ್ ಲಾನ್ಸರರು ಬ್ಯಾಂಡೇಜನ್ನು ನೋಡಿ ಕೇಳಿದರು.

" ಈ ಬ್ಯಾಂಡೇಜಿನ ಬಗ್ಗೆ ಹೇಳುವಿರೇನು? ಛೆ! ಛೆ! ಹೀಗೇನೂ ಇಲ್ಲ. ಇಂದು ಮುಂಜಾನೆ ದಿನ್ನೆಯ ಕೆಳಗಿನಿಂದ ಹಾಯ್ದು ಹೋಗುವಾಗ ಮೇಲಿನಿಂದ ಒಂದು ಕಲ್ಲು ಉರುಳಿ ಬಿದ್ದಿತು. ಅದಕ್ಕಾಗಿ ಈ ಬ್ಯಾಂಡೇಜನ್ನು ಕಟ್ಟಲಾಗಿದೆ. "

" ಆ ಕಲ್ಲನ್ನು ಯಾರಾದರೂ ಉದ್ದೇಶಪೂರ್ವಕವಾಗಿ ಒಗೆ ದಿಲ್ಲವೆನ್ನುವ ಬಗ್ಗೆ ನಿಮಗೆ ನಂಬುಗೆ ಇದೆಯಲ್ಲವೆ? "

" ಇದನ್ನೇನು ಕೇಳುವಿರಿ ರಾಯರೆ ? ಇಲ್ಲಿಯ ಜನರು ಅಂತಹ ಅತ್ಯಾಚಾರಿಗಳೇನೂ ಅಲ್ಲ. ಯುದ್ಧವನ್ನು ಅವರು ಸಂಪೂರ್ಣವಾಗಿ ಮರೆತು ಬಿಟ್ಟಿರುವರು. "

" ಹೀಗೇನು ? ಚೆನ್ನಾಗಿದೆ. ನನ್ನ ರಿಪೋರ್ಟಿನಲ್ಲಿ ನಿಮ್ಮ ಇಲ್ಲಿಯ ಕೆಲಸದ ಉಲ್ಲೇಖ ಮಾಡಿರುವೆನು. "

" ಆ ಬಗ್ಗೆ ನಾನು ನಿಮಗೆ ಋಣಿಯಾಗಿರುವೆನು. ಈ ನನ್ನ ಕೆಲಸಕ್ಕಾಗಿ ಬಹುಮಾನವೆಂದು ಮೇಯರ ಆರ್ಡೆನ್ಸರನ್ನು ಕಿತ್ತೊಗೆದು, ಅವರ ಅಧಿಕಾರವನ್ನು ನನಗೆ ಕೊಡಬೇಕೆಂದು ನನ್ನ ವಿನಂತಿ ಅದೆ. "

ಕರ್ನಲ್ ಲಾನ್ಸರರು ಮಿ ಕಾರೆಲ್‌ರ ಕಡೆಗೆ ತೀಕ್ಷ್ಣ ದೃಷ್ಟಿಯಿಂದ ನೋಡುತ್ತ ಹೇಳಿದರು. ' ಇಲ್ಲಿಯ ಜನರು ನಿಮ್ಮ ವಿಷಯದಲ್ಲಿ ಯಾವ ಅಭಿಪ್ರಾಯ ಪಡುವರೆಂಬುದು ನಿಮಗೆ ತಿಳಿದಿದೆಯೆ? "

" ಇಲ್ಲಿ ಅನೇಕ ಜನ ನನ್ನ ಮಿತ್ರರಿರುವರು; ಅಲ್ಲದೆ ಇಲ್ಲಿಯ ಎಲ್ಲ ಜನರನ್ನೂ ನಾನು ಗುರುತಿಸುವೆನು. "

" ಆದರೆ ಈಗ ಆ ಎಲ್ಲ ಜನರೂ ನಿಮ್ಮ ದ್ವೇಷ ಮಾಡ ಹತ್ತಿರುವರು. "

" ಆ ದ್ವೇಷಕ್ಕೆ ಹೇಗೆ ಪ್ರತಿಕಾರ ಮಾಡಬೇಕೆಂಬುದು ನನಗೆ ಗೊತ್ತಿದೆ. ಇಲ್ಲಿಯ ಎಲ್ಲ ಜನರೂ ನಮ್ಮ ಶತ್ರುಗಳಿರುವರು. "

ಸ್ವಲ್ಪ ಸಮಯದ ವರೆಗೆ ಕರ್ನಲ್ ಲಾನ್ಸರರು ಸುಮ್ಮನಾದರು. ತಮ್ಮ ಮನಸ್ಸಿನಲ್ಲಿಯ ವಿಚಾರವನ್ನು ಸ್ಪಷ್ಟವಾಗಿ ಹೇಳಬೇಕೋ ಬೇಡವೊ ? ಎಂಬುದನ್ನು ನಿಶ್ಚಯಿಸಿ, ಸೌಮ್ಯಸ್ವರದಲ್ಲಿ " ಇದು ನೋಡಿ ಮಿ. ಕಾರೆಲ್, ಇನ್ನು ಮೇಲೆ ನಮಗೂ ಕೂಡ

ನಿಮ್ಮ ವಿಷಯದಲ್ಲಿ ಆದರವೆನಿಸಲಾರದು " ಎಂದು ಹೇಳಿದರು.

ಈ ವಾಕ್ಯವನ್ನು ಕೇಳಿದ ಕೂಡಲೇ ಮಿ. ಕ್ಯಾರೆಲ್ ಒಮ್ಮೆಲೆ ಎದ್ದು ನಿಂತು ಹೇಳಿದರು. " ಇದನ್ನು ನೀವು ನಿಮ್ಮ ಸರ್ವಾಧಿಕಾರಿಯ ವಿರುದ್ಧ ಮಾತನಾಡುತ್ತಿರುವಿರಿ. ತಮ್ಮ ಎಲ್ಲ ಶಾಖೆಗಳು ಅಷ್ಟೇ ಮಹತ್ವದವು ಮತ್ತು ಯೋಗ್ಯತೆಯವೆಂದು ಅವರು ಹೇಳಿರುವರು. ಅದರಲ್ಲಿಯೂ ನಮ್ಮ ಗುಪ್ತಚರರ ಶಾಖೆಯು ಬಹಳೇ ಮಹತ್ವದ್ದೆಂದು ಅವರು ಸ್ಪಷ್ಟವಾಗಿ ಹೇಳಿರುವರು. "

ಮಿ. ಕ್ಯಾರೆಲ್‌ರ ಈ ಮಾತಿನಿಂದ ಕರ್ನಲ್ ಲಾನ್ಸರರು ಸಿಟ್ಟಾಗಲಿಲ್ಲ. ಅವರು ಶಾಂತತೆಯಿಂದಲೇ ಮುಂದೆ ಹೇಳಿದರು. "ಮಿ. ಕ್ಯಾರೆಲ್ ಈಗ ನಾವು ಸರಳಮಾರ್ಗದಿಂದಲೇ ವಿಚಾರಿಸುವಾ. ಆಕ್ರಮಿತ ಎಲ್ಲ ಪ್ರದೇಶದ ವ್ಯವಸ್ಥೆಯು ನನ್ನ ಕಡೆಗಿದೆ. ಇಲ್ಲಿಯ ಕಲ್ಲಿದ್ದಲಿಯನ್ನು ಖಣಿಯಿಂದ ಹೊರಗೆ ತೆಗೆದು ಕಳುಹಿಸುವುದು ನನ್ನ ಮುಖ್ಯ ಕೆಲಸ. ಅದು ಯಶಸ್ವಿಯಾಗಿ ಸಾಗಬೇಕಾಗಿದ್ದರೆ ಇಲ್ಲಿ ಶಾಂತತೆ ಮತ್ತು ಸುವ್ಯವಸ್ಥೆಯನ್ನು ನೆಲೆಗೊಳಿಸಬೇಕಾಗುತ್ತದೆ; ಮತ್ತು ಅದಕ್ಕಾಗಿ ಜನರಲ್ಲಿ ಏನು ಏನು ನಡೆದಿದೆ ಎಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಜನರು ದಂಗೆ ಮೊದಲಾದವುಗಳನ್ನು ಮಾಡುತ್ತಾರೆಂಬ ಕೆಟ್ಟ ವಿಚಾರಗಳನ್ನು ಮಾಡಿಯೇ, ಎಲ್ಲ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ತಿಳಿಯಿತೆ? "

' ಆದರೆ ನಿಮಗೆ ಬೇಕಾದ ಎಲ್ಲ ಸುದ್ದಿಗಳನ್ನೂ ನಾನು ದೊರಕಿಸಿಕೊಡಬಲ್ಲೆ. ನಾನು ಇಲ್ಲಿಯ ಮೇಯರನಾದರೆ ಅದು ನಿಮಗೆ ಬಹಳ ಲಾಭದಾಯಕವಾಗುವುದು. "

ಮಿ. ಕ್ಯಾರೆಲ್‌ರ ಈ ಅಭಿಪ್ರಾಯವು ಕರ್ನಲ್ ಲಾನ್ಸರರಿಗೆ ಸಮ್ಮತವಾಗಲಿಲ್ಲ. ಅವರು ನಕಾರಾತ್ಮಕ ತಲೆಯನ್ನು ಅಲು

ಗಾಡಿಸುತ್ತ ಹೇಳಿದರು. “ ನೀವು ತಪ್ಪುತ್ತಿರುವಿರಿ ಮಿಸ್ಟರ ಕ್ಯಾರೆಲ್ ! ಊರಲ್ಲಿ ಏನು ನಡೆದಿದೆಯೆಂಬುದು ಇನ್ನು ಮುಂದೆ ನಿಮಗೆ ಸ್ವಲ್ಪವೂ ತಿಳಿಯಲಾರದು. ಯಾಕಂದರೆ ಇನ್ನು ಮುಂದೆ ನಿಮ್ಮ ಸಂಗಡ ಯಾರೂ ಮಾತನಾಡಲಾರರು. ಇಷ್ಟೇ ಅಲ್ಲದೆ ಸಂಗಡ ಒಬ್ಬ ಸಂರಕ್ಷಕನನ್ನು ಕರೆದುಕೊಳ್ಳದ ವಿನಹ ನೀವು ತಿರುಗಾಡಲು ಹೋಗುವದೂ ಕೂಡ ಈಗ ಅಪಾಯಕಾರಕ. ಅಂತೆಯೇ ನೀವು ರಾಜಧಾನಿಗೆ ಹೋಗಬೇಕೆಂದು ನನಗನಿಸುವುದು. ಅಲ್ಲಿ ನಿಮ್ಮ ಇಲ್ಲಿಯ ಕಾರ್ಯದ ಬಗ್ಗೆ ಯೋಗ್ಯ ಬಹುಮಾನ ದೊರೆಯಬಹುದು ”

“ ಆದರೆ, ಅಲ್ಲಿಯೇ ಇರಬೇಕೆಂದು ನನ್ನ ಅಪೇಕ್ಷೆಯಿದೆ. ”

ಕರ್ನಲ್ ಲಾನ್ಸರರು ಮಿ. ಕ್ಯಾರೆಲ್‌ರ ಮಾತಿನ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ತಮಷ್ಟಕ್ಕೆ ತಾವೇ ಮಾತನಾಡುವಂತೆ ಮುಂದುವರೆಸಿದರು. “ ಮೇಯರ ಆರ್ಡೆನರು ಕೇವಲ ಇಲ್ಲಿಯ ಮೇಯರರಷ್ಟೇ ಅಲ್ಲ. ಇಲ್ಲಿಯ ಎಲ್ಲ ಜನರ ಪ್ರತಿನಿಧಿಯೂ ಇರುವರು. ಯಾರಿಂದ ಏನನ್ನೂ ಕೇಳದೆ, ಜನರ ತಲೆಯಲ್ಲಿ ಯಾವ ವಿಚಾರಗಳ ಗಾಳಿ ಬೀಸಹತ್ತಿದೆ ? ಜನರ ಮನಸ್ಸು ಹೇಗಿದೆ ? ಎಂಬುದನ್ನು ತಿಳಿಯಬಲ್ಲರು. ಅವರ ಮೇಲೆಯೇ ಸರಿಯಾದ ಲಕ್ಷ್ಯವನ್ನು ಇಟ್ಟರೆ, ಊರಲ್ಲಿಯ ಎಲ್ಲ ಸಮಾಚಾರವೂ ನನಗೆ ತಿಳಿಯುತ್ತದೆ........ಅದೇನೂ ಇಲ್ಲ........ಮಿಸ್ಟರ ಆರ್ಡೆನ್‌ರೇ ಮೇಯರರಾಗಿರಬೇಕೆಂಬುದು ನನ್ನ ಕೊನೆಯ ನಿರ್ಣಯ. ”

“ ನೀವು ಇಷ್ಟೇಕೆ ಜನರ ಪಕ್ಷಗಟ್ಟುವಿರಿ ? ಅವರನ್ನು ನಾವು ಪರಾಭವಗೊಳಿಸಿಲ್ಲವೆ? ”

ಕರ್ನಲ್ ಲಾನ್ಸರರು ತಿರಸ್ಕಾರದ ಸ್ವರದಲ್ಲಿ ಹೇಳಿದರು. “ ಯುದ್ಧದ ಪ್ರತ್ಯಕ್ಷ ಅನುಭವವಿರದಿದ್ದರೂ ತನಗೆ ಎಲ್ಲವೂ

ತಿಳಿಯುತ್ತದೆಂಬಂತೆ ನಟಿಸುವ ಜನರ ವಿಷಯಕ್ಕೆ ನನಗೆ ತಿರಸ್ಕಾರ ಉಂಟಾಗಿದೆ. ಹೋದ ಮಹಾಯುದ್ಧದಲ್ಲಿಯ ಒಂದು ಸಂಗತಿಯು ಇನ್ನೂ ನನ್ನ ಸ್ಮರಣೆಯಲ್ಲಿದೆ. ಅದನ್ನು ನಿಮಗೆ ಹೇಳುವೆನು. ಬ್ರುಸೆಲ ನಗರದಲ್ಲಿ ಒಬ್ಬ ವೃದ್ಧ ಸ್ತ್ರೀಯ ಸಂಗತಿಯು ಅದು. ಆ ಸ್ತ್ರೀಯ ರೂಪವು ಬಹಳ ಸುಂದರವಿತ್ತು; ಕೈಗಳು ಬಹಳ ನಾಜೂಕಾಗಿದ್ದುವು. ಅವಳು ತನ್ನ ಅತ್ಯಂತ ಮಧುರವಾದ ಸ್ವರದಲ್ಲಿ ನಮಗೆ ನಮ್ಮ ರಾಷ್ಟ್ರಗೀತೆಯನ್ನು ಹಾಡಿ ತೋರಿಸುತ್ತಿದ್ದಳು. ಈ ವೃದ್ಧ ಸ್ತ್ರೀಯ ಮಗನನ್ನು ನಾವು ಮೊದಲಿಗೆ ಕೊಲ್ಲಿಸಿದ್ದೆವು; ಆದರೆ ನಮಗೆ ಮೊದಲು ಈ ಸಂಗತಿಯು ತಿಳಿದಿರಲಿಲ್ಲ. ಯಾವಾಗ ನಾವು ಅವಳನ್ನು ಗುಂಡಿಕ್ಕಿ ಕೊಲ್ಲಲಾಯಿತೋ ಅಂದು ತಿಳಿಯಿತು. ಅದಕ್ಕೂ ಪೂರ್ವದಲ್ಲಿ ಹ್ಯಾಟಪಿನ್ ದಿಂದ ಅವಳು ನಮ್ಮಲ್ಲಿಯ ಹನ್ನೆರಡು ಜನರ ಪ್ರಾಣವನ್ನು ತೆಗೆದುಕೊಂಡಿದ್ದಳು. ”

“ ನೀವು ಅವಳನ್ನು ಕೊಂದಿರಲ್ಲವೆ ? ” ಮಿ. ಕ್ಯಾಪೆಲ್ ಕೇಳಿದರು

“ ಅವಶ್ಯ ! ”

“ ಅಂದ ಮೇಲೆ ಮುಂದೆ ಕೊಲೆಯಾಗುವುದು ನಿಂತಿರಬಹುದು ? ”

“ ಸ್ವಲ್ಪವೂ ಇಲ್ಲ ಕೊಲೆಗಳು ನಿಲ್ಲಲೇ ಇಲ್ಲ. ಅಲ್ಲದೆ ನಾವು ಅಲ್ಲಿಂದ ಹೊರಬಿದ್ದನಂತರ ಅಲ್ಲಿಯ ಜನರು ನಮ್ಮಲ್ಲಿಯ ಹತ್ತು ಜನರನ್ನು ಜೀವಂತವಾಗಿ ಸುಟ್ಟರು; ಕೆಲವು ಜನರ ಕಣ್ಣನ್ನು ಕಿತ್ತಿದರು. ಕೆಲವು ಜನರಿಗೆ ಉರುಲು ಹಾಕಿ ಗಿಡಗಳಿಗೆ ತೂಗಬಿಟ್ಟರು. ”

ಇಷ್ಟರಲ್ಲಿಯೇ ಹೊರಗಿನ ಅಟ್ಟದ ಪಾವುಟಿಗೆಗಳ ಮೇಲೆ ಒಮ್ಮಿಂದೊಮ್ಮೆಲೆ ಕಾಲ ಸಪ್ಪಳವಾದಂತಾಗಿ ಕೋಣೆಯ ಬಾಗಿ

ಲವು ತೆರೆಯಲ್ಪಟ್ಟಿತು. ಕ್ಯಾಪ್ಟನ್ ಲಾಫ್ಟ ಒಳಗೆ ಬಂದು ತನ್ನ ನಿತ್ಯದ ಮಂದ ಸ್ವರದಲ್ಲಿ ಕರ್ನಲ್ ಲಾನ್ಸರರಿಗೆ ಹೇಳಿದರು. "ಕ್ಯಾಪ್ಟನ್ ಬೆಂಟಿಕನ ಕೊಲೆಯಾಯಿತು ಸರ್."

"ಯಾರು ಹೊಡೆದರು ಅವನನ್ನು?"

"ಖಣಿಯಲ್ಲಿಯ ಒಬ್ಬ ಕೆಲಸಗಾರನು."

"ಸರಿ. ನೀವು ನಿಮ್ಮ ರಿಪೋರ್ಟನ್ನು ಸಿದ್ಧಮಾಡಿರಿ. ಆ ಕೆಲಸಗಾರನನ್ನು ಹಿಡಿದಿಟ್ಟಿರುವಿರಲ್ಲವೆ?"

"ಅಹುದು."

ಅನಂತರ ಕರ್ನಲ್ ಲಾನ್ಸರರು ಎದ್ದು ತಮ್ಮಷ್ಟಕ್ಕೆ ತಾವೇ ಮಾತನಾಡಿಕೊಳ್ಳುವಂತೆ ಹೇಳಹತ್ತಿದರು, "ಮತ್ತೆ ಪ್ರಾರಂಭವಾಯಿತು. ಈಗ ನಾವು ಈ ಕೆಲಸಗಾರನಿಗೆ ಗುಂಡಿಕ್ಕಿ ಕೊಂದು ಹೊಸ ಇಪ್ಪತ್ತು ಶತ್ರುಗಳನ್ನು ಹುಟ್ಟಿಸುವೆವು. ಆದರೆ ಎರಡನೆಯದೇನನ್ನು ತಾನೇ ಮಾಡಬಲ್ಲೆವು? ನಮ್ಮ ವಿರುದ್ಧ ಹೋಗುವವರನ್ನು ಕೊಲ್ಲುವುದಷ್ಟೇ ನಮಗೆ ತಿಳಿದಿದೆ."

[ ೩ ]

ಇಡೀ ಊರಿಗೇ ಒಂದು ಪ್ರಕಾರದ ದುಃಖಮಿಶ್ರಿತ ನಿರಾಶೆಯು ಆವರಿಸಿತ್ತು. ಭಾರವಾದ ಅಂತಃಕರಣದಿಂದ ಜನರು ಬೀದಿಯಲ್ಲಿ ಅಡ್ಡಾಡಿ, ತಮ್ಮ ನೈಮಿತ್ತಿಕ ಕಾರ್ಯಗಳನ್ನು ಪೂರ್ತಿಗೊಳಿಸುತ್ತಿದ್ದರು. ಅತ್ಯಲ್ಪ ಶಬ್ದಗಳಲ್ಲಿಯೇ ಜನರು ತಮ್ಮ ಕೆಲಸಗಳನ್ನು ಪೂರೈಸಿಕೊಳ್ಳುತ್ತಿದ್ದರು. ಅಕಸ್ಮಾತ ಶತ್ರುದಾಳಿಯಾದಾಗ ಊರವರೆಲ್ಲರೂ, ವಿಸ್ಮಯಗೊಂಡಿದ್ದರು. ಆ ವಿಸ್ಮಯವು ಅವರ ಕಣ್ಣುಗಳಲ್ಲಿ ಈಗಲೂ ಸಹ ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ

ಆ ವಿಸ್ಮಯದ ಸ್ಥಳದಲ್ಲಿ ಸಂತಾಪವು ತನ್ನ ಸ್ಥಾನವನ್ನು ಇನ್ನೂ ದೃಢಪಡಿಸಿದ್ದಿಲ್ಲ.

ಮೇಯರ ಸಾಹೇಬರ ದಿವಾಣಖಾನೆಯಲ್ಲಿ ಡಾಕ್ಟರ ವಿಂಟರ ಮತ್ತು ಮೇಯರ ಆರ್ಡೇನರು ಮಾತನಾಡುತ್ತ ಕುಳಿತಿದ್ದರು. ಅಲೆಕ್ಸ ಮಾರ್ಡೆನನು ಕ್ಯಾಪ್ಟನ್ ಬೆಂಟಿಕನ ಕೊಲೆ ಮಾಡಿದ್ದೇ ಅವರ ಮಾತಿನ ವಿಷಯವಾಗಿತ್ತು. ಅಲೆಕ್ಸನಿಗೆ ಮರಣದಂಡನೆಯ ಶಿಕ್ಷೆಯಾಗುವುದು ನಿಶ್ಚಿತವೇ ಇತ್ತು. ಆದರೆ ಈ ಶಿಕ್ಷೆಯಾಗುವ ಪೂರ್ವದಲ್ಲಿ ಶತ್ರುಗಳು ಅವನ ವಿಚಾರಣೆ ಮಾಡುವುದನ್ನು ನಿಶ್ಚಯಿಸಿದ್ದರು. ಮೇಯರ ಆರ್ಡೆನರಿಗೆ ಈ ವಿಚಾರಣೆಯ ನಾಟಕವು ಸ್ವಲ್ಪವೂ ಸರಿಬೀಳಲಿಲ್ಲ. ಅವರ ಮನೆಯಲ್ಲಿಯೇ ಈ ವಿಚಾರಣೆಯ ನಾಟಕವು ನಡೆಯುವುದಿರುವುದರಿಂದಂತೂ ಅವರು ಬಹಳ ಸಂತಾಪಗೊಂಡಿದ್ದರು.

ಇಬ್ಬರೂ ಮೇಲಿನ ವಿಷಯವಾಗಿ ಮಾತನಾಡುತ್ತಿರುವಾಗ ಕಿರುಮನೆಯ ಬಾಗಿಲವು ತೆರೆಯಲ್ಪಟ್ಟು ಸುಮಾರು ಇಪ್ಪತ್ತು ವರ್ಷದ ಸುಂದರ ಸ್ತ್ರೀಯು ಒಳಗೆ ಬಂದಳು.

ಆಕೆಯ ಕಡೆಗೆ ನೋಡುತ್ತಲೆ ಮೇಯರ ಆರ್ಡೆನರು ಕೇಳಿದರು. "ಮಾಲಿ ಮಾರ್ಡೆನ್ ಅಲ್ಲವೆ ನಿನ್ನ ಹೆಸರೇನು ? ಅಲೆಕ್ಸನ ಹೆಂಡತಿ ?"

"ಅಹುದು ರಾಯರೆ ! 'ಅಲೆಕ್ಸನ ವಿಚಾರಣೆ ಮಾಡಿ ಅವನನ್ನು ಗುಂಡಿಕ್ಕಿ ಕೊಲ್ಲುವರೆ'ಂದು ಜನರೆನ್ನುವರು. ಅದು ನಿಜವೆ? ನೀವು ಸ್ವತಃ ಅವನಿಗೆ ಮರಣ ದಂಡನೆಯನ್ನು ವಿಧಿಸುವಿರಂತೆ! ನಿಮ್ಮ ಒಂದು ಶಬ್ದದ ಮೂಲಕ ನನ್ನ ಪತಿಯು ಮೃತ್ಯುವಿನ ದವಡೆಯಲ್ಲಿ ಸಿಲುಕುವನು !"

ಆಲೆಕ್ಸನ ಪತ್ನಿಯು ಈ ಶಬ್ದವನ್ನು ಕೇಳಿ ಮೇಯರ ಆರ್ಡೆನರಿಗೆ ವಿಲಕ್ಷಣ ಆಶ್ಚರ್ಯವೆನಿಸಿತು. "ಏನು ಹೇಳುತ್ತಿರುವಿ ನೀನು ಇದನ್ನು ? ಯಾರು ಹೇಳಿದರು ನಿನಗೆ ಇದನ್ನು?" ಎಂದು ಅವಳನ್ನು ಕೇಳಿದರು.

"ಊರಲ್ಲಿಯ ಜನರು." ಎಂದು ಹೇಳಿ, ವಿನಂತಿಯ ಸ್ವರದಲ್ಲಿ ಮತ್ತೆ ಕೇಳಿದಳು. "ಆದರೆ ನೀವು ಮಾತ್ರ ಹಾಗೆ ಮಾಡಲಾರಿರಲ್ಲವೆ?"

"ನನಗೇ ಸ್ವತಃ ಗೊತ್ತಿಲ್ಲದ ಸಂಗತಿ ಊರವರಿಗೆ ಹೇಗೆ ಗೊತ್ತಾಯಿತು?"

'ಊರವರಿಗೆ ಹೇಗೆ ಗೊತ್ತಾಯಿತು ?" ಡಾಕ್ಟರ ವಿಂಟರರು ನಡುವೆಯೆ ನುಡಿದರು, "ಬಹಳ ಗೂಢವಾಗಿರುವುದು ಈ ಪ್ರಶ್ನೆ ! ಜಗತ್ತಿನ ಎಲ್ಲ ರಾಜಕಾರಣಗಳಿಗೂ ಇದು ಅನ್ವಯಿಸಿರುತ್ತದೆ" ಎಂದು.

"ಅಂದರೆ ನೀವು ಆಲೆಕ್ಸನಿಗೆ ದೇಹಾಂತದ ಶಿಕ್ಷೆಯನ್ನು ವಿಧಿಸಲಾರಿರಲ್ಲವೆ?" ಸ್ತ್ರೀಯು ಮತ್ತೆ ಕೇಳಿದಳು.

ಖುರ್ಚಿಯ ಬೆನ್ನುಹಿಂದೆ ನಿಂತು, ತನ್ನ ಕೈಗಳಿಂದ ಅವಳ ಬೆನ್ನನ್ನು ಸವರುತ್ತ ಮೇಯರ ಆರ್ಡೆನರು ಉತ್ತರ ಕೊಟ್ಟರು. "ಇಲ್ಲ. ನಾನು ಆಲೆಕ್ಸನಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಲಾರೆನು. ನಮ್ಮ ಜನರ ವಿರುದ್ಧ ಅವನು ಯಾವ ತರಹದ ಅಪರಾಧವನ್ನೂ ಮಾಡಿಲ್ಲ."

ಅನಂತರ ಮೇಯರ ಸಾಹೇಬರ ಆಭಾರ ಮನ್ನಿಸಿ ಮಾಲಿ ಮಾರ್ಡೆನಳು ಹೊರಗೆ ಹೊರಟು ಹೋದಳು.

ಆಕೆಯು ಹೋದ ಸ್ವಲ್ಪ ಹೊತ್ತಿನಲ್ಲಿಯೇ ಕರ್ನಲ್ ಲಾನ್ಸರರು ಬಂದರು, ಮತ್ತು ಮೇಯರರನ್ನು ಉದ್ದೇಶಿಸಿ "ನಿಮ್ಮ

ಆ ಖಣಿಯಲ್ಲಿಯ ಕೆಲಸಗಾರನು ನಮ್ಮ ಒಬ್ಬ ಅಧಿಕಾರಿಯ ಕೊಲೆ ಮಾಡಿರುವನು. ಅದು ನಿಮಗೆ ಗೊತ್ತಿದೆಯಲ್ಲವೇ? '' ಎಂಬರು ಕೇಳಿದರು

'' ಅಹುದು. ತಿಳಿದಿದೆ. ನೀವು ಅದೇ ಹೊತ್ತಿನಲ್ಲಿ ಅವನನ್ನು ಗುಂಡಿಕ್ಕಿ ಏಕೆ ಕೊಲ್ಲಲಿಲ್ಲ ? ಈ ವಿಚಾರಣೆಯ ಸೋಗನ್ನೇಕೆ ಮಾಡುವಿರಿ ? ಅದೂ ಕೂಡ ನನ್ನ ಬಂಗ್ಲೆದಲ್ಲಿಯೇ ಏಕೆ ಮಾಡುವಿರಿ? ''

'' ಇದು ನೋಡಿ, ಮೇಯರ ಸಾಹೇಬರೆ ! ಭಾವಿ ಅಪರಾಧಿಗಳಿಗೆ ಅವರ ಅತ್ಯಾಚಾರಗಳಿಂದ ಪರಾವೃತ್ತಗೊಳಿಸುವುದು ಶಿಕ್ಷೆಯ ಪ್ರಮುಖ ಉದ್ದೇಶವಿರುತ್ತದೆ. ಅದು ನನ್ನಂತೆಯೆ ನಿಮಗಾದರೂ ಗೊತ್ತಿರಲು ಸಾಕು! ಈ ಪ್ರಕಾರ ಪ್ರತ್ಯಕ್ಷ ಅಪರಾಧಿಗಿಂತಲೂ ಇತರ ಜನರ ಮನಸ್ಸಿನಲ್ಲಿ ಅಂಜಿಕೆಯನ್ನು ಹುಟ್ಟಿಸುವುದಿರುವುದರಿಂದ ಸಾಧ್ಯವಿದ್ದಷ್ಟು ಹೆಚ್ಚಿಗೆ ಅದರ ಪ್ರಚಾರ ಮಾಡಬೇಕಾಗುತ್ತದೆ. ನಮ್ಮ ನಿಯಮಗಳು ಅತ್ಯಂತ ಉಗ್ರವಾಗಿರುತ್ತವೆಂಬುದು ನಿಮಗೆ ತಿಳಿದೆ ಇವೆ. ನಮಗೆ ಇಲ್ಲಿಯ ಕಲ್ಲಿದ್ದಲಿ ಸಿಗಲೇಬೇಕು. ನಿಮ್ಮ ಜನರು ಒಂದು ವೇಳೆ ಶಾಂತತೆಯಿಂದ ಇರದಿದ್ದರೆ, ನಾವು ಒತ್ತಾಯದಿಂದ ಇಲ್ಲಿ ಶಾಂತತೆಯನ್ನು ಪ್ರಸ್ಥಾಪಿಸಬೇಕಾಗುತ್ತದೆ. ಅವಶ್ಯ ಕಂಡರೆ ನಮ್ಮ ಕೆಲಸವನ್ನು ಸುಗಮವಾಗಿ ಸಾಧಿಸಲು ಇಲ್ಲಿಯ ಜನರಿಗೆ ಗುಂಡಿಕ್ಕಿ ಕೊಲ್ಲಲು ಕೂಡ ನಾವು ಹಿಂದು ಮುಂದು ನೋಡುವುದಿಲ್ಲ. ಜನರಿಗೆ ಈ ಅನರ್ಥದಿಂದ ಆದಷ್ಟು ದೂರವಿರಿಸಿ ಅವರ ರಕ್ಷಣೆಯನ್ನು ಮಾಡಬೇಕೆಂದು ನಿಮಗೆನಿಸಿದರೆ, ಶಾಂತತೆಯನ್ನು ಪ್ರಸ್ಥಾಪಿಸುವ ಕೆಲಸದಲ್ಲಿ ನೀವು ನಮಗೆ ಸಹಾಯ ಮಾಡಲೇಬೇಕು. ಗೆದ್ದ ದೇಶದಲ್ಲಿ ಒಬ್ಬ ಅಪರಾಧಿಗೆ ಆತನ ಕೃತ್ಯದ ಬಗ್ಗೆ ಶಿಕ್ಷೆ ಮಾಡುವಾಗ ಅದನ್ನು ಅಲ್ಲಿಯ ಸ್ಥಾನಿಕ ಅಧಿಕಾರಿಯ ಕಡೆಯಿಂದಲೇ ಕೊಡಿ

ಸುವುದು. ಶಾಂತತೆಯ ದೃಷ್ಟಿಯಿಂದ ಹೆಚ್ಚು ಲಾಭಕರವೆಂದು ನಮ್ಮ ನಿದರ್ಶನಕ್ಕೆ ಬಂದಿದೆ. ''

" ಹೀಗೋ ! " ಮೇಯರ ಆರ್ಡೆನರು ಶಾಂತ ಸ್ವರದಲ್ಲಿ ಅಂದರು, " ಅಂದರೆ ಜನರಿಗೆ ತಿಳಿದುದು ಸರಿಯಾಗಿದೆಯೆಂದಂ ತಾಯಿತು ? ಆಶ್ಚರ್ಯ ! ವಿಚಾರಣೆಯ ನಾಟಕವು ಮುಗಿದ ನಂತರ ನಾನೇ ಅಲೆಕ್ಸನಿಗೆ ಫಾಂಸಿಯ ಶಿಕ್ಷೆಯನ್ನು ಹೇಳಬೇ ಕೆಂದು ನಿಮ್ಮ ಇಚ್ಛೆಯಿದೆಯೆ? ''

" ಅಹುದು. ಅದರಿಂದ ನೀವು ಸದ್ಯದ ರಕ್ತಪಾತವನ್ನು ನಿಲ್ಲಿಸಿ ದಂತಾಗುವುದು. ''

ಮೇಯರ ಆರ್ಡೆನರು ಒಂದು ಖುರ್ಚಿಯನ್ನು ಎಳೆದು ಕೊಂಡು ಕೂತು ಮುಂದಿನ ಟೇಬಲ್‍ದ ಮೇಲೆ ಎರಡೂ ಮೊಳ ಕೈಗಳನ್ನು ಇಟ್ಟು ವಿಚಾರ ಮಾಡಹತ್ತಿದರು. ಕೆಲ ಸಮಯ ವಿಚಾರ ಮಾಡಿದ ನಂತರ " ಕರ್ನಲ್ ಸಾಹೇಬರೆ ! ನೀವು ಮತ್ತು ನಿಮ್ಮ ಸರಕಾರ ಇಬ್ಬರಿಗೂ ವ್ಯವಹಾರಜ್ಞಾನವಿಲ್ಲ. ಜನರ ಮನಸ್ಸು ತಿಳಿದುಕೊಳ್ಳಲು ನೀವು ಎಂದೂ ಅಪೇಕ್ಷಿಸಿಲ್ಲ; ತಿಳಿದಿಲ್ಲ. ಅಂತೆಯೇ ನಿಮಗೆ ಶತಮಾನಗಳಿಂದ ಪರಾಜಯದ ಮೇಲೆ ಪರಾಜಯಗಳಾಗುತ್ತಿವೆ. ನಿಮ್ಮಷ್ಟು ಪರಾಭವವನ್ನು ಜಗತ್ತಿನಲ್ಲಿಯ ಯಾವ ರಾಷ್ಟ್ರವೂ ಅನುಭವಿಸಿಲ್ಲ ಈಗ ಆಚ ರಣೆಯಲ್ಲಿರುವ ಈ ಪದ್ಧತಿಯು ಎಂದೂ ಜಯವನ್ನು ಪಡೆಯಲು ಸಾಧ್ಯವಿಲ್ಲ ನಾವಿಬ್ಬರೂ ಕಾನೂನಿಗನುಸರಿಸಿ ನಡೆಯಬೇಕೆಂಬ ನಿಯಮವು ಹುಟ್ಟುವುದೇ ಇಲ್ಲ. ಯಾಕಂದರೆ ಪರಸ್ಪರರಲ್ಲಿ ಶತ್ರುತ್ವವಿದೆ. ಈಗ ನಿಮಗೆ ನಮ್ಮಲ್ಲಿಯ ಎಲ್ಲ ಜನರನ್ನೂ ಕೊಲ್ಲ ಬೇಕಾಗುವುದು; ಇಲ್ಲದಿದ್ದರೆ ನಾವು ಯೋಗ್ಯ ಸಮಯದಲ್ಲಿ ನಿಮ್ಮ ಪಾರುಪತ್ಯಗೊಳಿಸುವೆವು. ನೀವು ಮೊದಲಿಗೆ ನಮ್ಮ

ದೇಶದಲ್ಲಿ ಕಾಲಿಟ್ಟಾಗಲೇ ಕಾನೂನನ್ನು ಕಾಲಿನಿಂದ ಒದ್ದಿರಿ. ಈಗ ಇಲ್ಲಿ ಹೊಸದೊಂದು ಕಾನೂನೇ ಆಚರಣೆಯಲ್ಲಿದೆ. ತಿಳಿ ಯಿತೆ?" ಎಂದರು.

" ಮೇಯುರ ಸಾಹೇಬರೆ, ಯುದ್ಧದ ಅನುಭವವು ನನಗಿದೆ. ನೀವು ಈಗ ಹೇಳಿದ ವಿಷಯದ ಬಗ್ಗೆ ನಾನು ವೈಯಕ್ತಿಕವಾಗಿ ಒಪ್ಪಿಗೆಯನ್ನೀಯಬಹುದು. ಆದರೆ ಅದರಿಂದೇನೂ ಪ್ರಯೋ ಜನವಿಲ್ಲ. ದಾಳಿ ಮಾಡುವ ಸೈನಿಕರ ಮೇಲಧಿಕಾರಿಯೆಂದು ರಾಜಧಾನಿಯಿಂದ ನನ್ನನ್ನು ನಿಯಾಮಿಸಲಾಗಿದೆ. ಖಣಿಯಲ್ಲಿ ಕೆಲಸ ಮಾಡುವ ಆಲೆಕ್ಸನೆಂಬ ನಿಮ್ಮ ಮನುಷ್ಯನು ನಮ್ಮ ಒಬ್ಬ ಅಧಿಕಾರಿಯ ಕೊಲೆ ಮಾಡಿರುವನು; ಅದಕ್ಕಾಗಿ ಅವನನ್ನು ಗುಂಡಿಕ್ಕಿ ಕೊಲ್ಲಲೇಬೇಕು."

" ಹಾಗಾದರೆ ಕೊನೆಯ ನಿರ್ಣಯವನ್ನು ಮಾಡಿದ ನಂತ ರವೂ ಏಕೆ ನನ್ನೊಂದಿಗೆ ವಾದಿಸುತ್ತ ಕೂತಿರುವಿರಿ? "

" ಈ ಶಿಕ್ಷೆಯನ್ನು ವಿಧಿಸುವ ಕೆಲಸದಲ್ಲಿ ನಮಗೆ ನಿಮ್ಮ ಸಹ ಕಾರವು ಬೇಕಾಗಿದೆ."

" ಹೀಗೆ ಏನು? ನೀವು ನಮ್ಮ ಊರನ್ನು ಪ್ರವೇಶಿಸುವಾಗ ನಿಮ್ಮಲ್ಲಿಯ ಎಷ್ಟು ಜನರ ಕೈಯಲ್ಲಿ ಮಶಿನ್‌ಗನ್ನುಗಳಿದ್ದವು?"

" ಹೆಚ್ಚೆಂದರೆ ಇಪ್ಪತ್ತೈದು ಜನರ ಕೈಯಲ್ಲಿ ಇದ್ದವು."

" ಒಳ್ಳೇದು. ಈ ಇಪ್ಪತ್ತೈದು ಜನ ಸೈನಿಕರಿಗೂ ನೀವು ದೇಹಾಂತದ ಶಿಕ್ಷೆಯನ್ನು ವಿಧಿಸಲು ಸಿದ್ಧರಿದ್ದರೆ, ನಾನು ಆಲೆ ಕ್ಸನಿಗೆ ಶಿಕ್ಷೆಯನ್ನು ಹೇಳುವೆನು. ಇದಕ್ಕೆ ನೀವು ಒಪ್ಪುವಿರಾ?"

" ಇದನ್ನೇನು ಹೇಳುವಿರಿ ಮೇಯುರ ಸಾಹೇಬರೆ ? ನೀವು ಅನ್ನುವ ಮಾತು ಎಂದಾದರೂ ಶಕ್ಯವಾಗಲು ಸಾಧ್ಯವಿಲ್ಲ."

"ಅಹುದೋ ಅಲ್ಲೊ ? ಅದರಂತೆ ನೀವೂ ನನ್ನಿಂದ ಸಹಕಾರದ ಅಪೇಕ್ಷೆ ಮಾಡುತ್ತಿರುವುದು ನಿಮಗೆ ಎಂದೂ ಯಶಸ್ವಿಯಾಗಲಾರದು !"

[೪]

ಕೊನೆಗೆ ಮೇಯರ ಆರ್ಡೆನರ ಬಂಗ್ಲೆದಲ್ಲಿಯೆ ಆಲೆಕ್ಸನ ಅಪರಾಧದ ವಿಚಾರಣೆಯು ಆಯಿತು. ವಿಚಾರಣೆಯ ಸಮಯದಲ್ಲಿ ಕರ್ನಲ್ ಲಾನ್ಸರ, ಅವರ ಉಳಿದ ನಾಲ್ಕು ಜನ ಅಧಿಕಾರಿ, ಆಲೆಕ್ಸ, ಆತನ ಎರಡೂ ಮಗ್ಗುಲಿಗೆ ಇಬ್ಬರು ಸೈನಿಕರು ಮತ್ತು ಮೇಯರ ಆರ್ಡೆನ ಇಷ್ಟೇ ಜನರಿದ್ದರು. ವಿಚಾರಣೆಯ ನಾಟಕವು ಮುಗಿದ ನಂತರ ಕರ್ನಲ್ ಲಾನ್ಸರರು ಆಲೆಕ್ಸನಿಗೆ ಕೇಳಿದರು. "ನಿನಗೆ ಏನಾದರೂ ಹೇಳುವುದಿದೆಯೆ ?" ಎಂದು.

ಆಲೆಕ್ಸನು ಹೇಳಹತ್ತಿದನು. "ನಾನು ಬಹಳ ಸಿಟ್ಟಿನ ಮನುಷ್ಯನಿರುವೆನು. ಒಡಿದಾಟ ಮಾಡಿದಾಗ ನಾನು ಅಷ್ಟೊಂದು ಸ್ಮೃತಿಯಲ್ಲಿ ಇದ್ದಿಲ್ಲ. ನಾನು ಸ್ವತಂತ್ರ ಮನುಷ್ಯನು. ಕೆಲಸ ಮಾಡಲೇಬೇಕೆಂದು ನನ್ನ ಮೇಲೆ ಅಧಿಕಾರ ತೋರಿಸಿದ ಕೂಡಲೇ ನಾನು ಸಿಟ್ಟಿನಿಂದ ಹುಚ್ಚನಂತಾದೆ; ಮತ್ತು ಕೈಯಲ್ಲಿಯ ಗುದ್ದಲಿಯಿಂದ ಹೊಡೆದೆ. ಪೆಟ್ಟು ಬಲವಾಗಿ ಕೂತಂತೆ ಕಾಣುತ್ತದೆ. ನಿಜವಾಗಿ ಹೇಳುವುದೆಂದರೆ ನನಗೆ ಆ ಸತ್ತ ಮನುಷ್ಯನನ್ನು ಹೊಡೆಯುವ ಉದ್ದೇಶವಿದ್ದಿಲ್ಲ. ನನ್ನ ಮನಸ್ಸಿನಲ್ಲಿ ಈ ಮನುಷ್ಯನನ್ನು (ಕ್ಯಾಪ್ಟನ್ ಲಾಫ್ಟನನ್ನು ತೋರಿಸಿ) ಹೊಡೆಯುವುದಿತ್ತು. ಆದರೆ ಆ ಎರಡನೆಯ ಮನುಷ್ಯನು ಮಧ್ಯದಲ್ಲಿ ಪ್ರವೇಶಿಸಿ ಹೊಡೆತ ತಿಂದು ಸತ್ತನು."

"ಅದು ಹೋಗಲಿ." ಕರ್ನಲ್ ಲಾನ್ಸರರು ಮತ್ತೆ ಕೇಳಿದರು. "ನಿನಗೆ ಯಾರನ್ನು ಹೊಡೆಯಬೇಕಾಗಿತ್ತೆಂಬುದು

ಹೆಚ್ಚಿನ ಮಹತ್ವದ್ದಿಲ್ಲ. ಕ್ಯಾಪ್ಟನ್ ಬೆಂಟಿಕನಿಗೆ ಹೊಡೆದ ಬಗ್ಗೆ ಈಗ ನಿನಗೆ ವಿಷಾದವೆನಿಸುವುದೇನು ?''

''ವಿಷಾದ? ನನಗೆ ವಿಷಾದವೆನಿಸುವುದಿಲ್ಲ. ನಾನು ಸ್ವತಂತ್ರ ಮನುಷ್ಯನಿರುವೆನು. ನನಗೆ ಕೆಲಸ ಮಾಡಲೇಬೇಕೆಂದು ಹೇಳಲು ಅವನಿಗೇನು ಅಧಿಕಾರ ? ''

ಆನಂತರ ಕರ್ನಲ್ ಲಾನ್ಸರರು ಮತ್ತೊಮ್ಮೆ ಕೇಳಿದರು, ''ನಿನಗೆ ದೇಹಾಂತದ ಶಿಕ್ಷೆಯನ್ನು ವಿಧಿಸಿದರೂ ಪಶ್ಚಾತ್ತಾಪ ವೆನಿಸಲಾರದೆ?'' ಎಂದು.

'' ಇಲ್ಲ. ''

'' ಸರಿ. ಕಾಪ್ಟನ್ ಲಾಫ್ಟ! ವಿಚಾರಣೆಯ ಕೆಲಸವು ಮುಗಿ ಯಿತಲ್ಲವೆ ? ಯಾವುದನ್ನೂ ಮರೆತು ಬಿಡಲಿಲ್ಲವಲ್ಲವೆ ?''

'' ನೀವು ನನ್ನನ್ನು ಮರೆತು ಬಿಟ್ಟಿರಲ್ಲ !'' ಮೇಯರ ಆರ್ಡೆ ನರು ನಡುವೆಯೆ ಮಾತನಾಡಹತ್ತಿದರು. ''ಅಲೆಕ್ಸ, ಈ ಜನರು ನಮ್ಮ ಮೇಲೆ ಅಜಾನಕವಾಗಿ ದಾಳಿ ಮಾಡಿದರು. ವಿಶ್ವಾಸ ಘಾತ ಮಾಡಿ ಫ್ಯಾಸಿಸ್ಟ ಶಕ್ತಿಯ ಪ್ರೋತ್ಸಾಹನದಿಂದ ನಮ್ಮ ದೇಶವನ್ನು ವಶಪಡಿಸಿಕೊಂಡಿರುವರು. ಯಾವಾಗ ಈ ಜನರು ನಮ್ಮ ಊರನ್ನು ಪ್ರವೇಶಿಸಿದರೋ ಆಗ ನನ್ನಂತೆಯೇ ಇತರ ನಾಗರಿಕರೂ ಧೃತಿಗೆಟ್ಟರು. ಏನು ಮಾಡಬೇಕೆಂಬುದೇ ನಮಗೆ ತಿಳಿಯದಂತಾಯಿತು. ಆದರೆ ನಿನ್ನ ಈ ಬಹಿರಂಗವಾದ ಬಂಡಿ ನಿಂದ ಎಲ್ಲವೂ ಸುಗಮವಾದಂತಾಯಿತು. ನಿನ್ನ ಈ ವೈಯಕ್ತಿಕ ದ್ವೇಷವೆಂದರೇನೆ ಮುಂದಿನ ಸಾರ್ವಜನಿಕ ದ್ವೇಷದ ಉಗಮ. ನಾನು ಈ ಜನರೊಂದಿಗೆ ಸಹಕರಿಸುತ್ತಿರುವೆನೆಂದು ಊರವರಿಗೆ ಅನಿಸುತ್ತಿರಬಹುದು; ನನ್ನ ವಿಷಯದಲ್ಲಿ ಜನರಿಗಾದ ಈ ತಪ್ಪು ತಿಳುವಳಿಕೆಯನ್ನು ಮುಂದೆ ಇಲ್ಲದಂತೆ ಮಾಡುವೆನು. ನಿನಗೆ ಈ ಜನರು ಗುಂಡಿಕ್ಕಿ ಕೊಲೆ ಮಾಡುವುದನ್ನು ನಿಶ್ಚಯಿಸಿರು

ವರು. ಆದರೆ ಒಂದು ಮಾತನ್ನು ಮಾತ್ರ ನೆನಪಿನಲ್ಲಿಡು. ಇನ್ನು ಮುಂದೆ ಈ ಜನರಿಗೆ ನಮ್ಮ ದೇಶವನ್ನು ಬಿಟ್ಟು ಹೋಗದ ವಿನಃ ಇಲ್ಲವೆ ತಮ್ಮ ದೇಹವನ್ನು ಭೂಮಿಯ ಮೇಲೆ ಚೆಲ್ಲಿದ ವಿನಃ ಅವರಿಗೆ ವಿಶ್ರಾಂತಿಯೆನ್ನುವುದು ಕನಸಿನಲ್ಲಿಯೂ ದೊರೆಯಲಾರದು. ಮೃತ್ಯುವಿನ ದವಡೆಯಲ್ಲಿ ಹೊರಟ ಮನುಷ್ಯನಿಗೆ ಈ ಮಾತಿನಿಂದ ಸಸಮಾಧಾನವೆನಿಸಲಾರದು. ಆದರೆ ನನ್ನ ಈ ಶಬ್ದವು ನಿಜವಾಗಿ ಪರಿಣಮಿಸದೆ ಇರಲಾರವು. ಇದನ್ನು ಚೆನ್ನಾಗಿ ನೆನಪಿನಲ್ಲಿಡು. ”

ಮೇಯರ ಅರ್ಡೆನರ ಬಾಷಣವು ಮುಗಿದ ಕೂಡಲೇ ಅಲೆಕ್ಸನನ್ನು ಹೊರಗೆ ಒಯ್ಯಲಾಯಿತು. ಎಲ್ಲೆಡೆಯಲ್ಲಿಯೂ ಶಾಂತತೆಯು ಪಸರಿಸಿತು. ಆದರೆ ಅದು ಬಹಳ ಸಮಯದ ವರೆಗೆ ಉಳಿಯಲಿಲ್ಲ. ಸ್ವಲ್ಪೇ ಸಮಯದಲ್ಲಿ ಗುಂಡಿನ ಸಪ್ಪಳವು ಕೇಳಿಸಿತು. ಅಲೆಕ್ಸನನ್ನು ಆಹುತಿ ತಕ್ಕೊಳ್ಳಲಾಗಿತ್ತು ! ಗುಂಡಿನ ಸಪ್ಪಳವನ್ನು ಕೇಳಿದ ನಂತರ ಕರ್ನಲ್ ಲಾನ್ಸರರು ಬಿಡುಗಡೆಯ ದೀರ್ಘನಿಟ್ಟುಸಿರೊಂದನ್ನು ಬಿಟ್ಟರು. ಮೇಯರ ಆರ್ಡೆನರು ಮಾತ್ರ ಕಣ್ಣು ಮುಚ್ಚಿಕೊಂಡು ಸುಮ್ಮನೆ ಕೂತಿದ್ದರು.

ಅಲೆಕ್ಸನ ಕೊಲೆಗೈಯಲಾದ ಸ್ವಲ್ಪ ಸಮಯದಲ್ಲಿಯೇ ಬಂಗ್ಲೆಯ ಹೊರಗಡೆ ಕೋಲಾಹಲವುಂಟಾಗಿ ಜನರು ಚೀರಾಡುವ ಸಪ್ಪಳವು ಕೇಳಹತ್ತಿತು ಹೊರಗಿನಿಂದ ಒಂದು ಗುಂಡು ಹಾರಿಸಲಾಯಿತು ಖಿಡಕಿಯ ಕನ್ನಡಿಗಳು ಒಡೆದು, ಅದರ ತುಂಡುಗಳು ಒಳಗೆ ಬಿದ್ದುವು. ಲೆಫ್ಟನಂಟ ಪ್ರಕಲ್ಲರು ಭುಜದ ಮೇಲೆಕೈ ಯಾಡಿಸುತ್ತ ತನ್ನ ಸ್ಥಳದಿಂದ ಸಿಡಿದು ಬಿದ್ದರು. ಅವರ ಭುಜಕ್ಕೆ ಗುಂಡು ಸವರಿಸಿಕೊಂಡು ಹೋಗಿತ್ತು.

ಈ ಅತ್ಯಾಚಾರದ ಪ್ರಕಾರವನ್ನು ನೋಡಿದ ಕೂಡಲೆ ಕರ್ನಲ್ ಲಾನ್ಸರರು ಗಡಬಿಡಿಸಿ ಎದ್ದು ನಿಂತು, ಆವೇಶದಿಂದ ನುಡಿದರು. "ಪುನಃ ಪ್ರಾರಂಭವಾಯಿತು! ಕ್ಯಾಪ್ಟನ್ ಲಾಫ್ಟ, ಹೊರಗೆ ಬರ್ಫಿನ ಮೇಲೆ ಹೆಜ್ಜೆಯ ಗುರುತುಗಳು ಮೂಡಿರಬಹುದು. ಈಗಲೇ ಅಪರಾಧಿಯ ಶೋಧವಾಗಲೇಬೇಕು. ಇಲ್ಲಿ ನೋಡಿ ಮತ್ತೆ, ಊರಲ್ಲಿಯ ಪ್ರತಿಯೊಂದು ಮನೆಯ ಝಡತಿಯನ್ನು ಮಾಡಿ ಎಲ್ಲ ಆಯುಧಗಳನ್ನು ವಶಪಡಿಸಿಕೊಳ್ಳಿ. ಯಾರಲ್ಲಿ ಆಯುಧಗಳು ದೊರಕುವವೋ ಅವರೆಲ್ಲರನ್ನೂ ಕೊಲ್ಲಲಾಗುವುದು; ಮೇಯರ ಸಾಹೇಬರೇ ಇನ್ನು ನೀವು ನಮ್ಮ ಬಂಧನದಲ್ಲಿರಬೇಕಾಗುವುದು. ಒಂದು ಮಾತನ್ನು ಚೆನ್ನಾಗಿ ಸ್ಮರಣೆಯಲ್ಲಿಡಿರಿ, ಮತ್ತೆ ಇಂಥ ಅತ್ಯಾಚಾರ ಸಂಭವಿಸಿದರೆ ನಮ್ಮ ಒಬ್ಬ ಮನುಷ್ಯನ ಬಗ್ಗೆ ನಿಮ್ಮಲ್ಲಿಯ ಐದು, ಹತ್ತು ಇಷ್ಟೇಯೇಕೆ ನೂರು ಜನರ ಕೊಲೆ ಮಾಡದೆ ಬಿಡಲಾರೆವು."

[ ೫ ]

ದಿವಸದ ಮೇಲೆ ದಿವಸಗಳು, ತಿಂಗಳ ಮೇಲೆ ತಿಂಗಳು ಕಳೆದು ಹೋದುವು. ಬೇಸಿಗೆ ಹೋಗಿ ಚಳಿಗಾಲವು ಪ್ರಾರಂಭವಾಯಿತು. ಪ್ರಾರಂಭದಲ್ಲಿ ಕೆಲವು ದಿವಸ ಬರ್ಫ ಬಿದ್ದ ಕೂಡಲೆ ಕರಗಿ ಹೋಗುತ್ತಿತ್ತು. ಇತ್ತಿತ್ತಲಾಗಿ ಅದು ಕರುಗುವುದೇ ನಿಂತು ಹೋಯಿತು. ಊರಲ್ಲಿಯ ಎಲ್ಲ ಮನೆಗಳು ಬರ್ಫಿನಿಂದ ಅಚ್ಛಾದಿಸಲ್ಪಟ್ಟಿದ್ದುವು. ಶತ್ರುಗಳ ಚಿಕ್ಕ ಚಿಕ್ಕ ಹಡಗುಗಳು ಬಂದು ಕಲ್ಲಿದ್ದಲಿಯನ್ನು ತುಂಬಿಕೊಂಡು ಹೋಗುತ್ತಿದ್ದುವು. ಆದರೆ ಖಣಿಯಲ್ಲಿಯ ಇದ್ದಲಿಯು ಈಗ ಅಷ್ಟು ಸುಲಭವಾಗಿ ಹೊರಡುತ್ತಿಲ್ಲ. ಕೆಲಸಗಾರರ ಕೈಯಿಂದ ತಪ್ಪುಗಳಾಗಹತ್ತಿದುವು. ಅವರ ಕೆಲಸವೂ ಈಗ ಸಾವಕಾಶವಾಗಿ ಆಗಹತ್ತಿತು.

ನಡುನಡುವೆ ಯಂತ್ರಗಳು ಮುರಿಯುಹತ್ತಿದುವು; ಮತ್ತು ಅದನ್ನು ಸರಿಮಾಡಲು ಹೆಚ್ಚು ಸಮಯ ವ್ಯಯವಾಗಹತ್ತಿತು. ಸೋತ ದೇಶದಲ್ಲಿಯ ಜನರು ಸಾವಕಾಶವಾಗಿ ಸೇಡು ತೀರಿಸಿಕೊಳ್ಳುವ ಸಮಯವನ್ನು ನಿರೀಕ್ಷಿಸಹತ್ತಿದರು.

ಉಗೆಬಂಡಿಯ ಮಾರ್ಗದಲ್ಲಿಯೂ ಅಪಘಾತಗಳಾಗಹತ್ತಿದುವು. ಜನರು ರೇಲ್ವೆ ಹಳಿಗಳನ್ನು ಕಿತ್ತು ತೆಗೆಯುಹತ್ತಿದರು. ಮೊದಲು ಸರಿಯಾಗಿ ರಸ್ತೆಯನ್ನು ತಪಾಸು ಮಾಡಿದ ವಿನಹ ಯಾವುದೇ ಉಗೆಬಂಡಿಯು ಅಪಘಾತಕ್ಕೆ ಸಿಲುಕದೆ ಮುಟ್ಟುತ್ತಿರಲಿಲ್ಲ. ಈ ಅಪಘಾತದ ಬಗ್ಗೆ ಕೆಲವು ಜನರಿಗೆ ಗುಂಡಿಕ್ಕಿಕೊಲ್ಲಲಾಯಿತು; ಆದರೂ ಪರಿಸ್ಥಿತಿಯು ಸುಧಾರಿಸಲಿಲ್ಲ. ಚಳಿಗಾಲವು ಹೇಗೆ ಹೇಗೆ ಹೆಚ್ಚಾಗುತ್ತ ನಡೆಯಿತೋ ಅದರಂತೆಯೇ ಜನರ ಮನಸ್ಸಿನಲ್ಲಿಯ ಸೇಡು ಮತ್ತು ಪ್ರತಿಕಾರವೆಂಬ ಅಗ್ನಿಯು ಭರದಿಂದ ಹೊತ್ತಹತ್ತಿತು. ಆಹಾರ ಪದಾರ್ಥದ ಮೇಲೆ ನಿಯಂತ್ರಗಳನ್ನು ಕೂಡಿಸಲಾಯಿತು. ಶತ್ರುಗಳ ಆಜ್ಞೆಯನ್ನು ಪಾಲಿಸುವವರಿಗಷ್ಟೇ ಆಹಾರವು ದೊರೆಯುಹತ್ತಿತು; ಮತ್ತು ಆಜ್ಞಾಭಂಗ ಮಾಡುವವರು ಉಪವಾಸ ಸಾಯುವ ಪ್ರಸಂಗ ಬಂದಿತು. ಅದರಿಂದ ಅಸಹಾಯರಾದ ಜನರು ಮನದಲ್ಲಿಯೇ ಕುದಿಯುತ್ತ ಶತ್ರುಗಳ ಆಜ್ಞೆಯನ್ನು ಪಾಲಿಸಹತ್ತಿದರು. ಆಹಾರ ಪದಾರ್ಥಗಳ ಮೇಲೆ ಇದಕ್ಕೂ ಹೆಚ್ಚಿನ ನಿಯಂತ್ರಣವನ್ನಿಡಬೇಕೆಂದು ಶತ್ರುಗಳು ಇಚ್ಛಿಸುತ್ತಿದ್ದರು; ಆದರೆ ಅದು ಅಷ್ಟು ಸಹಜವಾಗಿರಲಿಲ್ಲ ಯಾಕಂದರೆ ಉಪವಾಸವಿದ್ದು ಕೆಲಸಗಾರರು ಇದ್ದಲಿಯನ್ನು ಅಗೆಯಲಾರರು; ಖಣಿಯಿಂದ ಮೇಲಕ್ಕೆಬ್ಬಿಸಿ ತರಲಾರರು; ಅದನ್ನು ವಾಹನದಲ್ಲಿ ತುಂಬಲೂ ಕೂಡ ಅಸಮರ್ಥರಾಗುವರು. ಇದರಿಂದ ದಿನದಿನಕ್ಕೆ ಜನರಲ್ಲಿಯ ದ್ವೇಷಾಗ್ನಿಯು ಬೆಳೆಯುತ್ತ ನಡೆಯಿತು.

ದಾಳಿ ಮಾಡಿದ ಸೈನಿಕರಲ್ಲಿಯೂ ಉತ್ಸಾಹವಿರಲಿಲ್ಲ. ವಾಸ್ತವಿಕವಾಗಿ ಅವರು ವಿಜಯೀ ವೀರರಿದ್ದರು. ಆದರೂ ಅವರಲ್ಲಿ ಉತ್ಸಾಹವಿರಲಿಲ್ಲ. ಊರಲ್ಲಿಯ ಒಬ್ಬನೂ ಕೂಡ ತಪ್ಪಿ ಅವರ ಸಂಗಡ ಮಾತನಾಡುತ್ತಿರಲಿಲ್ಲ. ಅದರಿಂದ ತಾವೇ ಪರಾಜಯಗೊಂಡಂತೆ ಅನಿಸಹತ್ತಿತು ಶತ್ರು ಸೈನಿಕರಿಗೆ. ಅವರಿಗೆ ಒಂದೇಸವನೆ ತಮ್ಮ ಮನೆಯು ನೆನಪಾಗಹತ್ತಿತು. ಆ ಊರನ್ನು ಅವರು ಗೆದ್ದರೂ ಕೂಡ ಅದರ ತಿರಸ್ಕಾರ ಉಂಟಾಗಹತ್ತಿತು. ಅವರಿಗೆ. ಈ ಯುದ್ಧವು ಎಂದೂ ಮುಗಿಯಲಾರದೆ? ನಾವು ಎಂದು ಮನೆಗೆ ಮರಳಿ ಹೋಗುವೆವು? ನಮಗೆ ವಿಶ್ರಾಂತಿ ಎಂದಾದರೂ ದೊರಕುವದೆ? ಈ ಊರ ಜನರು ಎಂದಾದರೂ ನಮ್ಮ ಬೆನ್ನು ಹತ್ತಿ ನಮ್ಮನ್ನು ಓಡಿಸಲಾರರೆ? ಮೊದಲಾದ ತ್ರಾಸದಾಯಕ ವಿಚಾರಗಳಿಂದ ಅವರ ತಲೆಯು ತುಂಬಿ ಹೋಯಿತು. ಗೆದ್ದವರ ಮನಸ್ಸಿನಲ್ಲಿ ಹುಟ್ಟಿದ ಈ ಹೊಸ ಅಂಜಿಕೆಯು ಒಂದೇಸವನೆ ತಾಂಡವವನ್ನು ಪ್ರಾರಂಭಿಸಿತು. ಅದರ ಜೊತೆಯಲ್ಲಿಯೇ ಊರವರ ದ್ವೇಷವೂ ಬೆಳೆಯುತ್ತ ನಡೆಯಿತು. ನಿತ್ಯದ ದೈನಂದಿನಿಕ ಜೀವನದಲ್ಲಿ ಆ ವಿಜಯೀ ಸೈನಿಕರಿಗೆ ವಿಚಿತ್ರ ಮತ್ತು ಕಟು ಅನುಭವಗಳು ಬರಹತ್ತಿದುವು. ಊರಲ್ಲಿಯ ಜನರು ಒಂದಡೆ ಕಲೆತು ಆನಂದದಿಂದ ಹರಟೆ ಹೊಡೆಯ ಹತ್ತಿದರೆ, ಶತ್ರು ಸೈನಿಕರಿಗೂ ಅವರಲ್ಲಿ ಹೋಗಿ ಕೊಡಬೇಕೆಂಬ ಇಚ್ಛೆಯು ಸಹಜವಾಗಿ ಹುಟ್ಟಹತ್ತಿತು. ಆದರೆ ಅವರು ಸಮೀಪಕ್ಕೆ ಬರಹತ್ತಿದಂತೆ ಜನರು ತಮ್ಮ ಮುಖಗಳಿಗೆ ಮುದ್ರೆಯನ್ನೊತ್ತಿಕೊಂಡು ಸುಮ್ಮನೆ ಕೂತು ಬಿಡುವರು. ಹೀಗಾಗಿ ಅಲ್ಲಿಯ ಮೊದಲಿನ ಆನಂದಮಯ ವಾತಾವರಣವು ಬಹಳ ಸಮಯದ ವರೆಗೆ ಉಳಿಯುತ್ತಿರಲಿಲ್ಲ. ಜನರ ಈ ಸಹಾನುಭೂತಿಜನ್ಯ ನಡವಳಿಕೆ ಮತ್ತು ಮೂಕ ಅಜ್ಞಾಧಾರತನವು

ವಿಜಯೀ ಸೈನಿಕರಿಗೆ ಒಂದು ತರಹದ ವಿಚಿತ್ರ ಕಿರುಕಳವನುಂಟು ಮಾಡುತ್ತಿದ್ದವು. ಅಂಗಡಿಗಳಲ್ಲಿಯ ಬಗೆ ಬಗೆ ಖಾದ್ಯ ಪದಾರ್ಥಗಳ ವಾಸನೆಗೆ ಶತ್ರು ಸೈನಿಕರ ಬಾಯಲ್ಲಿ ನೀರು ಬರುತ್ತಿದ್ದುವು. ಅದರಿಂದ ಅವರು ಒಳಹೊಕ್ಕು ಆ ಪದಾರ್ಥವನ್ನು ತರಹೇಳಿದರೆ, ಮೊದಲನೆಯ ತುತ್ತನ್ನು ಬಾಯಲ್ಲಿ ಹಾಕಿ ಹೀಗೆಯೇ ಉಗುಳಬೇಕಾಗುತ್ತಿತ್ತು. ಯಾಕಂದರೆ ಆ ಪದಾರ್ಥದಲ್ಲಿ ಬೇಕೆಂದು ಹೆಚ್ಚಾಗಿ ಉಪ್ಪನ್ನು ಹಾಕಲಾಗುತ್ತಿತ್ತು. ಊರಿನ ಉಳಿದ ಸ್ಥಳಗಳಲ್ಲಿಯೂ ಇದೇ ಪ್ರಕಾರದ ಕಟು ಅನುಭವವು ಶತ್ರು ಸೈನಿಕರಿಗೆ ಬರುತ್ತಿದ್ದವು.

ವಿಜಯೀ ಸೈನಿಕರಿಗೆ ಕಿರುಕಳಗಳು ಹೆಚ್ಚಾದಂತೆ ಅವರ ಸಹನಶೀಲತೆಯು ಮೇರೆಯು ಮೀರಹತ್ತಿತು. ರಾತ್ರಿ ಗಸ್ತಿ ಕಾವಲು ಮಾಡುವವರು ತಮ್ಮ ನೆರಳಿಗೆ ತಾವೇ ಅಂಜಿ ಗುಂಡುಹಾರಿಸಹತ್ತಿದರು. ಇದರಿಂದ ಮೂವರಿಗೆ ಹುಚ್ಚೇ ಹತ್ತಿತು. ಅವರನ್ನು ಸ್ವದೇಶದ ಕಡೆಗೆ ಕಳುಹಿಸಲಾಯಿತು. ಉಳಿದ ಸೈನಿಕರಿಗೂ ಹುಚ್ಚು ಹತ್ತುವ ಸಂಭವವಿತ್ತು. ಆದರೆ ಮರಳಿ ಕಳುಹಿಸಿದವರನ್ನು ದಯೆಯ ಸುಂದರ ಶಬ್ದಗಳ ಕೆಳಗೆ ಹೇಗೆ ಕೊಲ್ಲಲಾಗುತ್ತದೆಂಬುದು ಉಳಿದವರಿಗೆ ತಿಳಿದುದರಿಂದ ಮತ್ತೆ ಅಂತಹ ಘಟನೆಯು ಘಟಿಸಲಿಲ್ಲ.

ಮೇಯರ ಸಾಹೇಬರ ಬಂಗ್ಲೆದಲ್ಲಿಯ ಮೇಲ್ಭಾಗದಲ್ಲಿ ಯಾವಾಗಲೂ ಇರತಕ್ಕ ಶಾಂತತೆಯು ಈಗ ಇಲ್ಲದಂತಾಯಿತು. 'ಭಸ್‌ಭುಸ್' ಎಂದು ಸಪ್ಪಳ ಮಾಡುತ್ತ ಯಾವಾಗಲೂ ಎರಡು ಗ್ಯಾಸಬತ್ತಿಗಳು ಉರಿಯುತ್ತಲೇ ಇರುತ್ತಿದ್ದುವು. ಯಾಕಂದರೆ ಇಲೆಕ್ಟ್ರಿಕ್ ಮಿಶಿನ್ ಯಾವಾಗ ಕೆಡುವುದೆಂಬುದರ ನಿಯಮವಿರಲಿಲ್ಲ. ಆ ಗ್ಯಾಸಿನ ಪ್ರಕಾಶದಲ್ಲಿ ಮೇಜರ ಹಂಟರ, ಲೆಫ್ಟನಂಟ ಪ್ರಕಲ್ ಮತ್ತು ಲೆಫ್ಟನಂಟ ಟಾಡರರು ತಮ್ಮ ತಮ್ಮ

ಕೆಲಸಗಳಲ್ಲಿ ಮಗ್ನರಾಗಿದ್ದರು. ಮೇಲಿಂದ ಮೇಲೆ ಅಪಘಾತ ಗಳಾಗಹತ್ತಿದ್ದರಿಂದ ಮೇಜರ ಸಾಹೇಬರ ಕೆಲಸವು ಬಹಳ ವಾಗಿತ್ತು. ಅವರು ಯಾವುದೋ ಒಂದು ನಕಾಶೆಯನ್ನು ತಯಾ ರಿಸಹತ್ತಿದ್ದರು. ಲೆಫ್ಟನಂಟ ಪ್ರಕಲ್‌ನ ಕೈಯು ಇನ್ನು ಕೋಲಿನ ಕಿಸೆಯಿಂದ ಹೊರಬಿದ್ದಿದ್ದಿಲ್ಲ. ಲೆಫ್ಟನಂಟ ಟಾಡರರು ಪತ್ರ ಬರೆಯುವುದರಲ್ಲಿ ಮಗ್ನರಾಗಿದ್ದರು. ಮಧ್ಯದಲ್ಲಿಯೇ ಮುಖ ವನ್ನು ಮೇಲೆ ಮಾಡಿ ಲೆಫ್ಟನಂಟ ಟಾಡರರು ಮೇಜರ ಹಂಟರ ರಿಗೆ ಕೇಳಿದರು. ‘ ನಿಮ್ಮ ಆ ಡಾಯನಮ್ ಎಂದು ಸರಿಗೊಳ್ಳು ವುದು? ಈ ಗ್ಯಾಸಬತ್ತಿಗಳಿಂದ ನನಗಂತೂ ಬಹಳ ಬೇಜಾರ ಬಂದಿದೆ !”

“ಇಷ್ಟರಲ್ಲಿಯೇ ಸರಿಗೊಳ್ಳಬಹುದು ಆ ಡಾಯನಮ್. ಉತ್ತಮ ಜನರನ್ನು ಕೆಲಸಕ್ಕೆ ಹಚ್ಚಿರುವೆನು.” ಎಂದು ಮೇಜ ರರು ಉತ್ತರ ಕೊಟ್ಟರು.

“ಡಾಯನಮ್ ಒಡೆದ ಮನುಷ್ಯನನ್ನು ಹಿಡಿದಿರುವಿರಲಿಲ್ಲವೆ ನೀವು ?” ಪ್ರಕಲ್‌ರು ಮತ್ತೆ ಕೇಳಿದರು.

‘ಐದು ಜನರನ್ನು ಹಿಡಿದಿಟ್ಟಿರುವೆನು, ಅವರಲ್ಲಿ ಬಹುತರ ವಾಗಿ ಅಪರಾಧಿಯು ಇರಬಹುದು. ಸ್ವಲ್ಪ ಅದರಲ್ಲಿ ತಿಳಿಯು ತ್ತಿದ್ದರೆ, ಸಹಜವಾಗಿ ಡಾಯನಮ್‌ವನ್ನು ಕೆಡಿಸಲು ಬರುತ್ತದೆ; ಅಂತೇಯೆ ಈ ಅಪರಾಧಗಳಾಗಹತ್ತಿವೆ. ಸ್ವಲ್ಪ ಶಾರ್ಟ ಮಾಡಿದರೆ ಸಾಕು ಡಾಯನಾಮ್ ತನ್ನಷ್ಟಕ್ಕೆ ತಾನೇ ಒಡೆದು ಹೋಗುತ್ತದೆ. ಇಷ್ಟರಲ್ಲಿಯೇ ಅದು ರಿಪೇರಿಯಾಗಿ ದೀಪಗಳು ಹತ್ತಬಹುದು.”

“ಯಾವಾಗ ಈ ಕೆಲಸಗಳಿಂದ ನಮ್ಮ ಬಿಡುಗಡೆಯಾಗುತ್ತ ದೆಯೊ? ಸ್ವಲ್ಪ ಸಮಯವಾದರೂ ಮನೆಗೆ ಹೋಗಿ ವಿಶ್ರಾಂತಿ

ಯನ್ನು ಹೊಂದಲು ಯಾವಾಗ ಸಿಗುತ್ತದೆಯೊ ಯಾರಿಗೆ ಗೊತ್ತು? ಮೇಜರ, ನಿಮಗನಿಸುವುದಿಲ್ಲವೆ ವಿಶ್ರಾಂತಿಗಾಗಿ ಮನೆಗೆ ಹೋಗ ಬೇಕೆಂದು!'' ಎಂದು ಪ್ರಕಲ್‌ರು ದಿನಪತ್ರಿಕೆಯನ್ನು ನೋಡುತ್ತ ಕೇಳಿದರು.

''ಅವಶ್ಯವಾಗಿ!'' ಈ ಶಬ್ದಗಳನ್ನು ಉಚ್ಚರಿಸುವಾಗ ಮೇಜರರ ಸ್ವರವು ಒಂದು ಕ್ಷಣ ನಿರಾಶೆಯ ಅಂಧಕಾರವನ್ನು ಪ್ರವೇಶಿಸದೆ ಇರಲಿಲ್ಲ.

ಅಷ್ಟರಲ್ಲಿಯೆ ಇಲೆಕ್ಟ್ರಿಕ್ ದೀಪಗಳು ಹತ್ತಿದುವು. ಕೂಡಲೇ ಟಾಡರರು ಗ್ಯಾಸದೀಪಗಳನ್ನು ಆರಿಸಿ ಬಿಟ್ಟರು. ಮತ್ತು ಅರ್ಧ ಬರೆದ ಪತ್ರವನ್ನು ಮಡಿಕೆಮಾಡಿ ಕಿಸೆಯಲ್ಲಿ ಹಾಕುತ್ತ, ''ಇತ್ತಿತ್ತಲಾಗಿ ಮನೆಯಕಡೆಯಿಂದ ಹೆಚ್ಚಾಗಿ ಪತ್ರಗಳೇ ಬರುತ್ತಿಲ್ಲವಲ್ಲ? ಕಳೆದ ಎರಡು ವಾರಗಳಲ್ಲಿ ಒಂದೇ ಒಂದು ಪತ್ರದೊರಕಿದೆ!'' ಎಂದು ನಿಟ್ಟುಸಿರನ್ನು ಬಿಟ್ಟರು.

''ಯಾರೂ ನಿಮಗೆ ಪತ್ರವನ್ನೇ ಬರೆದಿರಲಿಕ್ಕಿಲ್ಲ.'' ಪ್ರಕಲ್‌ರು ಉತ್ತರ ಕೊಟ್ಟರು.

''ಇರಬಹುದು. ಹಾಗೂ ಇರಬಹುದು.'' ಎಂದು ಟಾಡರರು ಮತ್ತೆ ಮೇಜರರ ಕಡೆಗೆ ಹೊರಳಿ ಕೇಳಿದರು. ''ಆದರೆ, ಮನೆಯಲ್ಲಿ ಏನಾದರೂ ವಿಶೇಷ ಘಟನೆಯು ಘಟಿಸಿದರೆ— ಅಂದರೆ ಮನೆಯಲ್ಲಿ ಯಾರಾದರೂ ಸತ್ತರೆ— ಅದನ್ನು ನಮಗೆ ತಿಳಿಸುವರಲ್ಲವೆ?''

''ಅದೇನೂ ನನಗೆ ಗೊತ್ತಿಲ್ಲ.'' ಹಂಟರರು ಉತ್ತರ ಕೊಟ್ಟರು.

''ನನಗಂತೂ ಈ ಊರಿನ ಬೇಜಾರು ಬಂದಿದೆ. ಎಂದು ಈ ಊರನ್ನು ಬಿಡುವೆವೋ ಎಂದು ಅನಿಸಹತ್ತಿದೆ.''

ಲೆಫ್ಟನಂಟ ಪ್ರಕಲ್‌ರು ಮಧ್ಯದಲ್ಲಿಯೇ ಕೇಳಿದರು..''ಯುದ್ಧ ಮುಗಿದರೂ ಸಹ ನೀವು ಇಲ್ಲಿಯೇ ಹೊಲಮನೆಗಳನ್ನು ಮಾಡಿ ವಾಸಿಸಬೇಕೆಂದು ಇಚ್ಛಿಸುತ್ತಿದ್ದಿಲ್ಲವೆ?''

ಆದರೆ ಟಾಡರರು ಈ ಪ್ರಶ್ನೆಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಸ್ವಲ್ಪ ಸಮಯ ಅವರು ತನ್ನ ಖುರ್ಚಿಯಲ್ಲಿ ಹಾಗೇ ಕೂತರು; ಮತ್ತು ಎರಡೂ ಕೈಗಳಿಂದ ತಮ್ಮ ತಲೆಯನ್ನು ಘಟ್ಟಿಯಾಗಿ ಹಿಡಿದುಕೊಂಡು, ಅಳುವಿನ ಸ್ವರದಲ್ಲಿ ಹೇಳಹತ್ತಿದರು. "ಸ್ತ್ರೀಸಹವಾಸಕ್ಕಾಗಿ ನಾನು ಅತ್ಯಂತ ಉತ್ಸುಕನಾಗಿರುವೆನು. ಒಬ್ಬ ತರುಣ ಸ್ತ್ರೀಯನ್ನು ದೊರಕಿಸುವುದಕ್ಕಾಗಿಯೇ ನನಗೆ ಮನೆಗೆ ಹೋಗಬೇಕಾಗಿದೆ. ಈ ಊರಲ್ಲಿಯೂ ಸಹ ಒಬ್ಬ ತರುಣ ಸುಂದರ, ಮೋಹಕ ಸ್ತ್ರೀ ಇರುವಳು. ಅನೇಕ ಸಲ ನಾನು ಆಕೆಯನ್ನು ನೋಡಿರುವೆನು ಆಕೆಯ ಕೂದಲುಗಳು ಕಪ್ಪಾಗಿ ಸುಂದರವಾಗಿರುವವು. ಆ ಹಳಿಯ ಕಬ್ಬಿಣದ ಸಾಮಾನುಗಳನ್ನು ಮಾರುವ ಅಂಗಡಿಯ ಹತ್ತರವೇ ಆ ಸ್ತ್ರೀಯ ಮನೆ ಇರುವುದು ನನಗೆ ಆ ತರುಣ ಸ್ತ್ರೀಯು ಬೇಕಾಗಿರುವಳು."

ಅದೇ ಸಮಯದಲ್ಲಿ ಇಲೆಕ್ಟ್ರಿಕ್ ದೀಪಗಳು ಒಮ್ಮಿಂದೊಮ್ಮೆ ಬಂದಾದವು. ಎಲ್ಲೆಡೆಯಲ್ಲಿಯೂ ಅಂಧಕಾರವು ತಾನೇ ತಾನೆಂದು ಪಸರಿಸಿತು. ಕಡ್ಡಿಯನ್ನೂ ಹಚ್ಚಿ ಗ್ಯಾಸಿನ ದೀಪಗಳನ್ನು ಹಚ್ಚುತ್ತ ಮೇಜರ ಹಂಟರರು ಹೇಳಹತ್ತಿದರು. "ಇನ್ನೂ ನಿಜವಾದ ಅಪರಾಧಿಯು ಸಿಕ್ಕ ಹಾಗೆ ಕಾಣುವುದಿಲ್ಲ! ಈಗ ಹಿಡಿದಿಟ್ಟ ಐವರಲ್ಲೇ ಅಪರಾಧಿ ಇರುವನೆಂದು ನನಗನಿಸಿತು!" ಎಂದು ಹೇಳಿದರು.

ಅಷ್ಟರಲ್ಲಿಯೇ ಬಾಗಿಲವು ಸಾವಕಾಶವಾಗಿ ತೆರೆಯಲ್ಪಟ್ಟು ಕ್ಯಾಪ್ಟನ್ ಲಾಫ್ಟ ಒಳಗೆ ಬಂದರು. ತಮ್ಮ ತಲೆಯಮೇಲಿನ ಶಿರಸ್ತ್ರಾಣವನ್ನು ತೆಗೆದು, ಹೆಗಲ ಮೇಲಿನ ಬರ್ಫನ್ನು ಸವರುತ್ತ ಹೇಳಿದರು. "ಇದರಿಂದ ನನಗೆ ಬಹಳ ಬೇಜಾರು ಬಂದಿದೆ."

"ಏನಾಯಿತು?" ಹಂಟರರು ಕೇಳಿದರು.

"ಅಪಘಾತದ ವಿನಹ ಮತ್ತೇನಾಗುವುದು ಇಲ್ಲಿ. ಮತ್ತೆ ಈಗ ನಿಮ್ಮ ಡಾಯನಾಮ್‌ವನ್ನು ಕೆಡಿಸಿ ಬಿಟ್ಟಂತೆ ಕಾಣುತ್ತದೆ ಅವರು.

ಖಣಿಯಲ್ಲಿಯ ಕೆಲಸವನ್ನು ಮಾತ್ರ ನಾನು ಸುರಕ್ಷಿತವಾಗಿ ಸಾಗಿಸಿರುವೆನು.''

"ಅಲ್ಲಿ ಏನಾದರೂ ಗಲಭೆಯಾಗಿತ್ತೇನು ಮತ್ತೆ?"

"ಎರಡನೇಯದು ಏನು? ಯಂತ್ರ ಕೆಡುವುದು! ಕೆಲಸ ಸಾಗದಾಗುವುದು! ಆದರೆ ಇಂದು ಯಂತ್ರವನ್ನು ಕೆಡಿಸುವ ಮನುಷ್ಯನನ್ನು ಸರಿಯಾಗಿ ಶೋಧಿಸಿರುವೆನು; ಮತ್ತು ಅವನನ್ನು ಗುಂಡಿಕ್ಕಿ ಕೊಂದು ಬಿಟ್ಟಿರುವೆನು! ಮೇಜರ, ನಾನೊಂದು ಉಪಾಯವನ್ನು ಹುಡುಕಿರುವೆನು. ಈ ಅತ್ಯಾಚಾರದ ಸಲುವಾಗಿ ಕೆಲಸಗಾರರನ್ನು ಉಪವಾಸ ಇಡುವದಂತೂ ಸಾಧ್ಯವಿಲ್ಲವೆ! ಆದರೆ ಇದ್ದಲಿಯು ಖಣಿಯಿಂದ ಸುವ್ಯವಸ್ಥಿತವಾಗಿ ಹೊರಬೀಳದಿದ್ದರೆ, ಆ ಕೆಲಸಗಾರರ ಮನೆಯವರಿಗೆ ಸ್ವಲ್ಪಾದರೂ ಆಧಾರವನ್ನು ಕೊಡಲಾಗುವುದಿಲ್ಲ. ಸಾಯು ಮಕ್ಕಳು ಉಪವಾಸ! ಕೆಲಸಗಾರರಿಗೆ ಖಣಿಯಲ್ಲಿಯೇ ಊಟಕ್ಕೆ ಹಾಕಲಾಗುವುದು. ಅಂದರೆ ಕೆಲಸಗಾರರ ಆಹಾರದಲ್ಲಿ ಕುಟುಂಬದ ಜನರು ಪಾಲುಗಾರರಾಗುವುದು ಬೇಡ. ನನಗನಿಸುವು ಈ ಉಪಾಯದಿಂದ ಸರಿಯಾದ ಮಾರ್ಗಕ್ಕೆ ಬರುವರೆಂದು! ಮಕ್ಕಳು ಮರಿಗಳನ್ನು ಉಪವಾಸ ಕೆಡಹುವುದು ಇರದಿದ್ದರೆ ಉತ್ತಮ ರೀತಿಯಿಂದ ಕೆಲಸ ಮಾಡಬೇಕಾಗುತ್ತದೆ. ಈ ಪ್ರಕಾರವಾಗಿ ನಾನು ಎಲ್ಲ ಕೆಲಸಗಾರರಿಗೂ ಇಂದು ಹೇಳಿರುವೆನು."

"ಆಗ ಅವರೇನು ಅಂದರು?"

"ಏನನ್ನುವರು? ಅವರು ಎಂದಾದರೂ ಏನನ್ನಾದರೂ ಅಂದಿರುವರೇನು? ಅವರು ಏನನ್ನೂ ಅನ್ನಲಿಲ್ಲ. ಒಬ್ಬನ ಬಾಯಿಂದಲೂ ಚಕಾರ ಶಬ್ದವು ಹೊರ ಬೀಳಲಿಲ್ಲ. ಆದರೆ ಇದ್ದಲಿ ಮಾತ್ರ ಇಂದು ಸುವ್ಯವಸ್ಥಿತವಾಗಿ ಹೊರಡುವುದೆಂದು ನನಗನಿಸಹತ್ತಿದೆ."

ಕ್ಯಾಪ್ಟನ್ ಲಾಫ್ಟ ಮತ್ತು ಮೇಜರ ಹಂಟರ ಇವರಿಬ್ಬರಲ್ಲಿಯ ಮೇಲಿನ ಸಂಭಾಷಣೆಯು ಮುಗಿದನಂತರ, ಲೆಫ್ಟನಂಟ ಟಾಡರರು ಸಾವಕಾಶವಾಗಿ ಕ್ಯಾಪ್ಟನ್ ಲಾಫ್ಟರಿಗೆ ಕೇಳಿದರು. "ಕ್ಯಾಪ್ಟನ್, ಮನೆಯ ಕಡೆಯ ಸುದ್ದಿ ಏನಾದರೂ ತಿಳಿದಿದೆಯೇನು ನಿಮಗೆ?"

"ಸ್ವಲ್ಪ ಸ್ವಲ್ಪ ತಿಳಿದಿದೆ."

"ಅತ್ತ ಎಲ್ಲವೂ ಸುರಕ್ಷಿತವಾಗಿರುವುದಲ್ಲವೆ?"

"ಅಹುದು. ಎಲ್ಲವೂ ಸುರಕ್ಷಿತ. ಎಲ್ಲ ಕಡೆಗಳಲ್ಲಿಯೂ ನಮ್ಮ ಸೇನೆಯು ಮುಂದೊತ್ತುತ್ತಿದೆ."

"ಆದರೆ ಇನ್ನೂ ಬ್ರಿಟಿಷರ ಪರಾಭವವಾಗಿಲ್ಲವೇನು ?"

"ಪ್ರತಿಯೊಂದು ಯುದ್ಧದಲ್ಲಿ ನಾವು ಅವರನ್ನು ಪರಾಭವಗೊಳಿಸಿರುವೆವು."

"ಆದರೂ ಅವರು ಇನ್ನೂ ಯುದ್ಧ ಮಾಡುತ್ತಿರುವರಲ್ಲ?"

"ಎಂಥ ಯುದ್ಧ ಮಾಡುತ್ತಾರೆ? ನಡುನಡುವೆ ಯಾವಾಗದರೊಂದು ಸಲ ಬಾಂಬುಗಳನ್ನು ಚೆಲ್ಲುತ್ತಾರೆ. ವಿಶೇಷವೇನೂ ಇಲ್ಲ."

"ಅಂದರೆ ಈಗ ನಾವು ಯುದ್ಧದಲ್ಲಿ ಜಯವನ್ನು ಪಡೆದಂತಾಯಿತಲ್ಲವೆ?"

"ಅವಶ್ಯ."

ಆನಂತರ ಟಾಡರರು ತೀಕ್ಷ್ಣದೃಷ್ಟಿಯಿಂದ ಲಾಫ್ಟರನ್ನು ನೋಡುತ್ತ "ಕ್ಯಾಪ್ಟನ್, ಈಗ ನೀವು ಹೇಳಿದ ಎಲ್ಲ ಸಂಗತಿಗಳ ಬಗ್ಗೆ ನಿಮ್ಮ ಪೂರ್ಣ ವಿಶ್ವಾಸವಿರುವುದಲ್ಲವೆ?" ಎಂದು ಕೇಳಿದರು.

"ಅಂದರೆ, ನೀವು ಏನು ಕೇಳುತ್ತಿರುವಿರಿ ಇದನ್ನು? ನಿಮ್ಮ ಪ್ರಶ್ನೆಯು ಅರ್ಥವೇ ಆಗುವುದಿಲ್ಲ ನನಗೆ."

"ಈ ಯುದ್ಧವು ಮುಗಿದಿದ್ದರೆ ನಮಗೆ ಸ್ವದೇಶಕ್ಕೆ ಹೋಗಲು ಏಕೆ ಅಪ್ಪಣೆ ದೊರೆಯುವಲ್ಲದು?"

"ನಮಗಿನ್ನೂ ಗೆದ್ದ ದೇಶಗಳ ಪುನರ್ಘಟನೆಯನ್ನು ಮಾಡ ಬೇಕಾಗಿದೆ. ಅದಕ್ಕೆ ಸ್ವಲ್ಪ ಸಮಯ ಹಿಡಿಯುವುದು. ಒಂದೆರಡು ದಿವಸಗಳಲ್ಲಿ ಹೊಸ ವ್ಯವಸ್ಥೆಯನ್ನು ಪ್ರಸ್ತಾಪಿತಗೊಳಿ ಸಲು ಸಾಧ್ಯವೆ?"

"ಒಟ್ಟಿನಲ್ಲಿ ನಿಮ್ಮ ಈ ಪುನರ್ಘಟನೆ ಮತ್ತು ಹೊಸ ವ್ಯವಸ್ಥೆಯ ಕೆಲಸವು ನಮ್ಮ ಇಡೀ ಆಯುಷ್ಯದ ತುಂಬ ನಡೆಯುವಂತೆ ಕಾಣುತ್ತದೆ! ಏನರಿ, ಕ್ಯಾಪ್ಟನ್ ಸಾಹೇಬರೆ, ನಾವು ಈ ಊರನ್ನು ಗೆದ್ದಿರುವೆವಲ್ಲವೆ?"

"ಅಹುದು."

ಅದಕ್ಕೆ ಲೆಫ್ಟನಂಟ ಟಾಡರರು ಒಬ್ಬ ಹುಚ್ಚನಂತೆ ಒಮ್ಮಿಂ ದೊಮ್ಮೆಲೆ ಘಟ್ಟಿಯಾಗಿ ನಗಹತ್ತಿದರು. ನಗನಗುತ್ತ ಒದರಿ ಹೇಳ ಹತ್ತಿದರು "ನಾವು ಈ ಊರನ್ನು ಗೆದ್ದಿರುವೆವು, ಆದರೂ ನಾವೆಲ್ಲ ಇಲ್ಲಿ ಕುರಿಗಳಂತೆ ಆಚರಿಸುತ್ತಿರುವೆವು! ಊರನ್ನು ಪಾದಾಕ್ರಾಂತಗೊಳಿಸಿದ ವಿಜಯೀ ಸೈನಿಕರಿದ್ದರೂ ಕೂಡ ಇಲ್ಲಿ ಹುಚ್ಚರಂತೆ ನಮ್ಮ ಸ್ಥಿತಿಯಾಗಿದೆ. ವಿಜಯದ ನಂತರ ವಿಜಯ ಗಳು ದೊರಕುತ್ತಿದ್ದರೂ ಪ್ರತಿಯೊಂದು ವಿಜಯದ ಹಿಂದೆ ದುಃಖದ ಮತ್ತು ನಾಶದ ಆಳವಾದ ಮಡುವಿನಲ್ಲಿ ಸಿಕ್ಕು ಬೀಳು ತ್ತಿರುವೆವು. ಗೆದ್ದದೇಶಗಳಲ್ಲಿ ಗೆದ್ದವರೆಂದು ನಾವು ಎದೆ ಸೆಟೆದು ಅಡ್ಡಾಡುತ್ತಿದ್ದರೂ ಪ್ರತಿಯೊಂದು ಸ್ಥಳದಲ್ಲಿ ನಾವು ಸೆರೆ ಸಿಕ್ಕಂತಾಗಿದೆ."

ಈಗ ಮಾತ್ರ ಲೆಫ್ಟಿನಂಟ ಟಾಡರು ಸ್ಮೃತಿಯಲ್ಲಿಲ್ಲವೆಂಬುದು ಕ್ಯಾಪ್ಟನ್ ಲಾಫ್ಟರಿಗೆ ಪೂರ್ಣ ಮನವರಿಕೆಯಾಯಿತು. ಇಂಥ ಬಡಬಡಿಕೆಯನ್ನು ಇನ್ನು ಬಹಳ ಸಮಯದ ವರೆಗೆ ಕೇಳುವ ಶಕ್ತಿಯು ಅವರಲ್ಲಿ ಉಳಿಯಲಿಲ್ಲ. ಕೂಡಲೇ ಅವರು ಲೆಫ್ಟಿನಂಟ ಟಾಡರ್ ಮುಖದ ಮೇಲೆ ಬಲವಾದ ಗುದ್ದನ್ನು ಕೊಟ್ಟು ಅವರ ಬಡಬಡಿಕೆಯನ್ನು ನಿಲ್ಲಿಸಿದರು.

[೬]

ಊರಲ್ಲಿ ಕಟ್ಟುನಿಟ್ಟಾದ 'ಕರ್ಫ್ಯೂ ಆರ್ಡರ'ನ್ನು ಸಾರಿದ್ದರಿಂದ ಶತ್ರುಸೈನಿಕರ ಗಸ್ತೀದಲದ ವಿನಃ ಬೇರೆ ಯಾರೂ ಅಡ್ಡಾಡುವಂತಿರಲಿಲ್ಲ. ಅಲ್ಲಲ್ಲಿ ಚಿಕ್ಕ ಚಿಕ್ಕ ಶತ್ರುಸೈನಿಕರ ತಂಡಗಳು ಇತ್ತಿಂದ ಅತ್ತ ಅತ್ತಿಂದ ಇತ್ತ ಓಡಾಡುವುದು ಕಂಡುಬರುತ್ತಿತ್ತು.

ಚಳಿಗಾಲವು ಇನ್ನೂ ಹೋಗಿರಲಿಲ್ಲ. ಊರಲ್ಲಿಯ ಎಲ್ಲ ಮನೆಗಳಂತೆ ಕಬ್ಬಿಣ ಸಾಮಾನುಗಳನ್ನು ಮಾರುವ ಅಂಗಡಿಯ ಹತ್ತಿರವಿರುವ ಚಿಕ್ಕ ಮನೆಯೂ ಬರ್ಫಿನಿಂದ ಆಚ್ಛಾದಿಸಲ್ಪಟ್ಟಿತ್ತು. ಆ ಮನೆಯ ಬಾಗಿಲು ಕಿಡಿಕಿಗಳು ಘಟ್ಟಿಯಾಗಿ ಮುಚ್ಚಲ್ಪಟ್ಟಿದ್ದುವು. ಅದರಿಂದ ಮನೆಯಲ್ಲಿಯ ಪ್ರಕಾಶದ ಒಂದು ಕಿರಣವೂ ಕೂಡ ಹೊರಗೆ ಗೋಚರಿಸುತ್ತಿದ್ದಿಲ್ಲ. ಮನೆಯಲ್ಲಿ ಕೂಡ್ರುವ ಕೋಣೆಯಲ್ಲಿ ಒಂದು ದೀಪವು ಉರಿಯುತ್ತಿತ್ತು.

ಮಾಲಿ ಮಾರ್ಡನ್ — ಅಲೆಕ್ಸನ ವಿಧವಾ ಸ್ತ್ರೀ— ಆ ಕೋಣೆಯಲ್ಲಿ ಒಂದು ಖುರ್ಚಿಯ ಮೇಲೆ ಒಬ್ಬಳೇ ಕೂತಿದ್ದಳು. ಒಂದು ಹಳೆಯ ಸ್ವೀಟರದ ಧಾರಗಳನ್ನು ಕಾಳಜೀ ಪೂರ್ವಕವಾಗಿ ವಿಂಗಡಿಸಿ, ಅದನ್ನು ಸುತ್ತುವುದರಲ್ಲಿ ಆಕೆಯು ಮಗ್ನಳಾಗಿದ್ದಳು. ಆಕೆಯ ಮುಂದೆ ಇರುವ ಚಿಕ್ಕ ಟೇಬಲಿನ ಮೇಲೆ ಹೊಲಿಗೆಯ

ಉದ್ದನ್ನ ಎರಡು ಸೂಜಿ ಮತ್ತು ದೊಡ್ಡ ಕತ್ತರಿಯನ್ನು ಇಡಲಾಗಿತ್ತು.

ಆಕೆಯು ದಾರವನ್ನು ಸುತ್ತುವುದರಲ್ಲಿ ಮಗ್ನಳಾಗಿರುವಾಗ ಮುಂಚೆಯ ಬಾಗಿಲ ಮೇಲೆ ಯಾರೋ 'ಟಕ್ ಟಕ್' ಸಪ್ಪಳ ಮಾಡಿದಂತಾಗಿ, ಆಕೆಯ ಕೆಲಸಕ್ಕೆ ವಿಘ್ನವುಂಟಾಯಿತು. "ಬಂದೆ" ಎಂದು ಮಾಲಿಯು ತನ್ನ ಖುರ್ಚಿಯಿಂದೆದ್ದು ಮುಂದಿನ ಬಾಗಿಲವನ್ನು ತೆರೆದಳು.

ಬಾಗಿಲಲ್ಲಿ ಆನಿ— ಮೇಯರ ಸಾಹೇಬರ ಅಡಿಗೆಯವಳು— ನಿಂತಿದ್ದಳು. ಒಳಗೆ ಬಂದವಳೆ ಅವಳು ಮುಂದಿನ ಬಾಗಿಲವನ್ನು ಘಟ್ಟಿಯಾಗಿ ಮುಚ್ಚಿಕೊಂಡು, ಮಾಲಿಗೆ ಹೇಳಿದಳು, "ಮೇಯರ ಆರ್ಡೆನ್, ಡಾಕ್ಟರ ವಿಂಟರ ಮತ್ತು ಆರ್ಡಸ್ ಬಂಧಗಳಿಬ್ಬರು ಇಂದು ರಾತ್ರಿ ಇಲ್ಲಿ ಬರುವವರಿದ್ದಾರೆ; ಮತ್ತು ಇದನ್ನು ಹೇಳುವುದಕ್ಕಾಗಿಯೇ ನಾನು ಮೊದಲಿಗೆ ಬಂದೆ."

"ಇಲ್ಲಿ ಏಕೆ ಬರುವವರಿದ್ದಾರೆ?"

"ಆ ಆರ್ಡಸ್ ಬಂಧುಗಳಿಬ್ಬರೂ ಹಡಗದಿಂದ ಇಂಗ್ಲಂಡಕ್ಕೆ ಹೋಗುವವರಿದ್ದಾರೆ. ಈಗ ಅವರು ಈ ಊರನ್ನು ಬಿಡಲೇ ಬೇಕಾಗಿ ಬಂದಿದೆ. ಅವರ ತಮ್ಮನ್ನು— ರಾಬರ್ಟ— ಇಂದು ಇದ್ದಲಿಯನ್ನು ತೆಗೆದುಕೊಂಡು ಹೋಗುವ ಒಂದು ಮೋಟಾರನ್ನು ಸುಟ್ಟಿದ್ದು ನಿನಗೆ ಗೊತ್ತೇ ಇದೆ. ಆದ್ದರಿಂದ ಆತನ ಕುಟುಂಬ ದಲ್ಲಿಯ ಎಲ್ಲರನ್ನು ಶತ್ರುಗಳು ಹಿಡಿಯುವ ಪ್ರಯತ್ನ ನಡೆಯಿಸಿ ರುವರು. ಇಂದು ಒಂದು ರಾತ್ರಿ ನಿನ್ನ ಮನೆಯಲ್ಲಿ ಅಡಗಿ ಕೊಳ್ಳಲು ಬರುವವರಿದ್ದಾರೆ ಅವರು."

"ಆದರೆ ಮೇಯರ ಸಾಹೇಬರು ತಮ್ಮ ಬಂಗ್ಲೆಯಿಂದ ಹೇಗೆ ಹೊರಬೀಳುವರು? ಅವರಾದರೂ ಬಂಧನದಲ್ಲಿರುವರಲ್ಲ?"

“ಇಂದು ಜಾನ್— (ಮೇಯರ ಸಾಹೇಬರ ಸೇವಕ) ಮಲಗಿಕೊಳ್ಳುವವನು ಅವರ ಹಾಸಿಗೆಯ ಮೇಲೆ. ಸಂಶಯ ಬರಬಾರದೆಂದು ಅವನು ಮೇಯರ ಸಾಹೇಬರ ರಾತ್ರಿಯ ಅರಿವೆಗಳನ್ನು ಹಾಕಿಕೊಳ್ಳುವನು; ಮತ್ತು ಯಜಮಾನಿಯೂ ಕೂಡ ಅವನ ಹತ್ತಿರವೇ ಮಲಗಿಕೊಳ್ಳುವಳು ಇಂದು. ಒಳ್ಳೇದು, ಈಗ ಹೋಗುತ್ತೇನೆ ನಾನು. ಕೂಡಲೆ ಮರಳಿಹೋಗಿ ಹೇಳಬೇಕಾಗಿದೆ ‘ನಿನ್ನ ಮನೆಯು ಸುರಕ್ಷಿತವಾಗಿದೆ’ ಎಂದು. ಮತ್ತೆ ಬರುತ್ತೇನೆ ಅವರ ಜೊತೆಯಲ್ಲಿ.’’

ಆನಿಯು ಮರಳಿ ಹೋದ ನಂತರ ಮಾಲಿಯು ಸ್ವಲ್ಪ ಹೊತ್ತು ಕೆಲಸ ಮಾಡಿದಳೋ ಇಲ್ಲವೊ ಅಷ್ಟರಲ್ಲಿ ಬಾಗಿಲನ್ನು ಬಡೆದ ಸಪ್ಪಳವಾಯಿತು. ಮಾಲಿಯು ಎದ್ದು ಬಾಗಿಲನ್ನು ತೆರೆದಳು. ಲೆಫ್ಟನಂಟ ಟಾಡರರು ನಿಂತಿದ್ದರು! ಒಳಗೆ ಬರಬರುತ್ತ ಅವರು ಹೇಳಿದರು. “ಅಂಜಬೇಡ. ನಾನು ನಿನಗೆ ಯಾವ ಪ್ರಕಾರದ ತೊಂದರೆಯನ್ನೂ ಕೊಡುವುದಿಲ್ಲ. ನನಗೆ ಕೇವಲ ನಿನ್ನ ಸಂಗಡ ಮಾತನಾಡುವುದಿದೆ; ಮತ್ತು ನಿನ್ನ ಮಾತುಗಳನ್ನು ಕೇಳುವುದಿದೆ. ಕೇವಲ ಇಷ್ಟೆ ನನಗೆ ಬೇಕಾಗಿದೆ. ಸ್ವಲ್ಪ ಸಮಯ ನಾವಿಬ್ಬರೂ ಯುದ್ಧವನ್ನು ಸಂಪೂರ್ಣವಾಗಿ ಮರೆತು ಬಿಡುವಾ, ಮತ್ತು ಸಭ್ಯ ನಾಗರಿಕರಂತೆ ಒಬ್ಬರಿಗೊಬ್ಬರು ಮಾತನಾಡುತ್ತ ಕೂಡ್ರುವಾ.’’

ಮಾಲಿಯು ಬಹಳ ಹೊತ್ತಿನ ವರೆಗೆ ದಿಟ್ಟಿಸಿ ನೋಡಿದ ನಂತರ ನಗುತ್ತ ಹೇಳಿದಳು. “ನಾನು ಯಾರು ಇದ್ದೇನೆ ಅನ್ನುವುದು ನಿಮಗೆ ಇನ್ನೂ ತಿಳಿದಿಲ್ಲ ಕಾಣುತ್ತದೆ?’’

ಈ ಪ್ರಶ್ನೆ ಕೇಳುವುದರಲ್ಲಿ ‘ಯಾವ ಮನುಷ್ಯನಿಗೆ ನೀವೆಲ್ಲರೂ ಕೂಡಿ ಗುಂಡಿಕ್ಕಿಕೊಂದಿರುವಿರೋ ಆ ಅಲೆಕ್ಸ ಮಾರ್ಡೆನನ ಹೆಂಡತಿ ನಾನು.’ ಎಂದು ಮಾಲಿಗೆ ಸೂಚಿಸುವ ಉದ್ದೇಶವಿತ್ತು.

ಆದರೆ, ಆಕೆಯ ಪ್ರಶ್ನೆಯ ಗರ್ಭಿತಾರ್ಥವು ಲೆಫ್ಟನೆಂಟ್ ಸಾಹೇಬರ ಲಕ್ಷ್ಯಕ್ಕೆ ಬರಲಿಲ್ಲ. ಅವರೆಂದರು "ಅನೇಕ ಸಲ ನೋಡಿರುವೆನು ನಾನು ನಿನ್ನನ್ನು. ಒಬ್ಬ ಸುಂದರಿ ಇರುವಿ! ಆದರೆ, ಅಂಜಬೇಡ. ನನಗೆ ಕೇವಲ ನಿನ್ನ ಸಂಗಡ ಸ್ವಲ್ಪ ಸಮಯ ಮಾಡುವುದು ಬೇಕಾಗಿದೆ. ಒಬ್ಬಂಟಿಗನಾಗಿರುವುದರಿಂದ ನನಗೆ ಹುಚ್ಚು ಹಿಡಿದಂತಾಗಿದೆ. ಅಂತೆಯೆ ನಿನ್ನ ಸಂಗಡ ಸ್ವಲ್ಪ ಹೊತ್ತು ಹರಟೆ ಹೊಡೆಯಲು ಬಂದಿರುವೆನು"

ಟೇಬಲದ ಮೇಲಿನ ಹೋಲಿಗೆಯ ಸಾಮಾನುಗಳನ್ನು ತೆಗೆದು ಕೊಳ್ಳುತ್ತ ಮಾಲಿಯು ಉತ್ತರ ಕೊಟ್ಟಳು. "ಆದರೆ, ನಿಮಗೆ ಇಲ್ಲಿ ಹದಿನೈದು ನಿಮಿಷಕ್ಕಿಂತ ಹೆಚ್ಚು ಸಮಯ ಸಿಗಲಾರದು. ಕೂತುಕೊಳ್ಳಿರಿ." ಎಂದು.

ಟಾಡರರು ಆಕೆಯ ಸಂಗಡ ಯಾವ ಅತಿಪ್ರಸಂಗವನ್ನೂ ಮಾಡುವ ಪ್ರಯತ್ನ ಮಾಡಲಿಲ್ಲ. ಅವರು ಆಕೆಯ ಸಂಗಡ ಕೇವಲ ತನ್ನ ಒಂಟಿಗತನದ ಬೇಸರಿಕೆಯ ಜೀವನದ ಬಗ್ಗೆ ಮತ್ತು ಬೇರೆ ಕೆಲವು ಅಲ್ಲಿಯ ಇಲ್ಲಿಯ ಸುದ್ದಿಗಳ ಬಗ್ಗೆ ಹರಟೆ ಹೊಡೆಯುತ್ತಿದ್ದರು. ಮಧ್ಯದಲ್ಲಿಯೇ ಅವರು ಸಹಜವಾಗಿ ಆಕೆಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡರು. ಕೂಡಲೇ ಆಕೆಯು ತನ್ನ ಕೈಯನ್ನು ಹಿಂತೆಗೆದುಕೊಂಡು, ಪೂರ್ವದಲ್ಲಿಯ ಯಾವುದೋ ಒಂದು ಸ್ಮೃತಿ ಚಿತ್ರವನ್ನು ನೋಡುತ್ತಿರುವವರಂತೆ ಗಂಭೀರ ಸ್ವರದಲ್ಲಿ ಅನ್ನಹತ್ತಿದಳು. "ಅವರಿಗೆ ಸಮಾಧಾನ ಗೊಳಿಸುವ ಬಹಳ ಪ್ರಯತ್ನ ಮಾಡಿದೆ; ಆದರೆ, ಅದರ ಉಪಯೋಗವೇನೂ ಆಗಲಿಲ್ಲ. ಏನು ನಡೆದಿದೆ ಅನ್ನುವುದೇ ಮೊದಲು ಅವರ ಲಕ್ಷಕ್ಕೆ ಬರಲಿಲ್ಲ. ಹೋಗುವಾಗ ಅವರು ನನ್ನ ಚುಂಬನವನ್ನೂ ತೆಗೆದುಕೊಳ್ಳಲಿಲ್ಲ."

ಟಾಡರರು ಕೂಡಲೆ ಆಕೆಯ ಕೈಯನ್ನು ಬಿಟ್ಟು ಕೇಳಿದರು, ''ನಿನ್ನ ಗಂಡನ ವಿಷಯವಾಗಿ ನೀನು ಮಾತನಾಡುತ್ತಿರುವಿಯೇನು?''

''ಅಹುದು. ನನ್ನ ಗಂಡನ ವಿಷಯವಾಗಿ ಮಾತನಾಡುತ್ತಿರುವೆನು. ನೀವೇ ನನ್ನ ಗಂಡನನ್ನು ನನ್ನಿಂದ ಕಸಿದುಕೊಂಡಿರಿ! ಗುಂಡಿಕ್ಕಿಕೊಂದಿರಿ !!''

ಮಾಲಿಯ ಈ ಶಬ್ದಗಳನ್ನು ಕೇಳಿ ಟಾಡರರಿಗೆ ಕೆಡಕೆನಿಸಿತು. ಅವರು ಎದ್ದು ನಿಂತು ಕೇಳಿದರು.'' ಒಳ್ಳೇದು ಗುಡ್ ನಾಯಿಟ್! ನಾನು ಮತ್ತೆ ಬರಬಹುದೆ?''

''ನನಗೇನೂ ಕೇಳಬೇಡಿ.''

''ಆದರೂ ನಾನು ಬರುವೆನು ಮತ್ತೊಮ್ಮೆ ಇಲ್ಲಿ''

ಲೆಫ್ಟನಂಟ ಟಾಡರರು ಹೊರಟು ಹೋದನಂತರ ಆನಿಯು ಸಾವಕಾಶವಾಗಿ ಬಾಗಿಲವನ್ನು ತೆರೆದು ಒಳಗೆ ಒಂದಳು; ಮತ್ತು ಅಸಮ್ಮತಿಯ ಸ್ವರದಲ್ಲಿ ಮಾಲಿಯನ್ನು ಕೇಳಿದಳು. ''ಈಗ ಇಲ್ಲಿಂದ ಯಾರೋ ಹೋದುದನ್ನು ನೋಡಿದೆ. ಯಾರು ಅವನು? ನನಗೆ ಸೈನಿಕನಂತೆ ಕಂಡನು ಅವನು.''

''ಅಹುದು. ಅವನು ಸೈನಿಕನೆ ಇದ್ದ.'' ಮಾಲಿಯು ಉತ್ತರ ಕೊಟ್ಟಳು.

''ಇಲ್ಲಿ ಏನು ಮಾಡುತ್ತಿದ್ದ ಅವನು?''

''ನನ್ನ ಸಂಗಡ ಪ್ರೇಮ ಚೇಷ್ಟೆ ಮಾಡಲು ಬಂದಿದ್ದನು ಅವನು.''

''ಮಾಲೀ, ನೀನು ಶತ್ರು ಪಕ್ಷದಲ್ಲಿ ಕೂಡಿಕೊಂಡಿಲ್ಲವಷ್ಟೇ?''

''ಇಲ್ಲ.''

"ಮೇಯರರು ಇಲ್ಲಿ ಬಂದನಂತರ ಏನಾದರೂ ಅನಿಷ್ಟವು ಸಂಭವಿಸಿದರೆ, ಅದರ ಎಲ್ಲ ಹೊಣೆಯು ನಿನ್ನ ಮೇಲೆಯೆ ಇದೆ ಅನ್ನುವುದು ನಿನಗೆ ಚೆನ್ನಾಗಿ ನೆನಪಿನಲ್ಲಿದೆಯಲ್ಲವೆ?"

"ಅಹುದು. ಆದರೆ, ನಾನೇನು ಹಾಗೆ ಆಗಲು ಬಿಡಲಾರೆ. ಎಲ್ಲಿರುವವರು ಅವರು?"

"ಹೊರಗೆ ಕತ್ತಲಲ್ಲಿ ಅಡಗಿ ನಿಂತಿರುವರು."

"ಈಗ ಅವರನ್ನು ಒಳಗೆ ಕರಕೊಂಡು ಬಾ."

ಅನಿಯು ಹೋಗಿ ಮೇಯರ ಆರ್ಡೆನ್, ಡಾಕ್ಟರ ವಿಂಟರ ಮತ್ತು ಆರ್ಡಸ್ ಬಂಧುಗಳಿಬ್ಬರನ್ನು ಕರೆತಂದು, ಮುಂದಿನ ಬಾಗಿಲವನ್ನು ಘಟ್ಟಿಯಾಗಿ ಮುಚ್ಚಿದಳು. ಒಳಗೆ ಬಂದ ಕೂಡಲೇ ಮೇಯರ ಆರ್ಡೆನರ ಮುಂದುವರೆದು ಹೋಗಿ ಮಾಲಿಯ ಹಣೆಯನ್ನು ಮುದ್ದಿಟ್ಟರು; ನಂತರ ಆನಿಯ ಕಡೆಗೆ ಹೊರಳಿ ಹೇಳಿದರು. "ಆನಿ, ನೀನು ಬಾಗಿಲದ ಹತ್ತಿರವೇ ನಿಲ್ಲು. ಗಸ್ತೀತಿರುಗುವ ಸೈನಿಕರು ಸಮೀಪ ಬಂದುಕೂಡಲೇ ಒಂದು ಚಿಟುಕೆಯನ್ನು ಬಾರಿಸು; ಮತ್ತು ಅವರು ಹೋದ ನಂತರ ಮತ್ತೆ ಮೊದಲಿನಂತೆ ಒಂದು ಚಿಟುಕೆಯನ್ನು ಬಾರಿಸು. ಯಾವುದಾದರೂ ವಿಶೇಷ ಪ್ರಕಾರದಹೊಸ ಸಂಕಟ ಬರುವಂತೆ ನಿನಗೆ ಕಂಡು ಬಂದರೆ ಒಮ್ಮೆಲೆ ಎರಡು ಚಿಟುಕೆಯನ್ನು ಬಾರಿಸು. ತಿಳಿಯಿತಲ್ಲವೆ?"

ಆನಿಯು ಹೊಂಕಾರಾರ್ಥ ತಲೆಯನ್ನು ಅಲುಗಾಡಿಸಿದಳು.

ಎಲ್ಲರೂ ತಮ್ಮ ಸ್ಥಳಗಳಲ್ಲಿ ಕೂತನಂತರ ಮೇಯರ ಆರ್ಡೆನರು ಆರ್ಡಸ್ ಬಂಧುಗಳನ್ನುದ್ದೇಶಿಸಿ ಹೇಳಹತ್ತಿದರು. "ಇಂದು ಬೇಕೆಂದು ನಿಮ್ಮನ್ನು ಇಲ್ಲಿ ಕರೆತರಲಾಗಿದೆ. ಕೆಲವು ದಿವಸಗಳ ಹಿಂದೆ ಶತ್ರುಗಳು ಆಲೆಕ್ಸ ಮಾರ್ಡೆನನ ಕೊಲೆ ಮಾಡಿದರು. ಇಂದು ನಿಮ್ಮ ಅಣ್ಣನಿಗೂ ಅದೇ ಹಾದಿಯನ್ನು ತೋರಿ

ಸಿದರು. ಇಂಥ ಅತ್ಯಾಚಾರಗಳಿಂದ ನಮ್ಮ ಜನರಿಗೆ ಬಹಳ ಸಿಟ್ಟು ಬಂದಿದೆ. ಆದರೆ, ಅವಶ್ಯಕ ಸಾಧನದ ಅಭಾವದಿಂದ ಅದು ಇವತ್ತಿನ ಮಟ್ಟಿಗೆ ನಿರುಪಯುಕ್ತವಾಗಿದೆ. ದಾಳಿ ಮಾಡಿದ ಶತ್ರು ಸೈನಿಕರ ಸಂಗಡ ಯುದ್ಧ ಮಾಡಲು ನಾವೆಲ್ಲರೂ ಸಿದ್ಧ ರಾಗಿರುವೆವು. ಆದರೆ, ಇಂದಿನ ಪರಿಸ್ಥಿತಿಗೆ ಅದು ಸಾಧ್ಯವಿಲ್ಲ. ಈಗ ನೀವಿಬ್ಬರೂ ಇಂಗ್ಲಂಡಕ್ಕೆ ಹೊರಟಿರುವಿರಿ. ಒಂದು ವೇಳೆ ಅಲ್ಲಿಯ ಜನರು ನಿಮ್ಮ ಹೇಳಿಕೆಯನ್ನು ಕೇಳಲಿಕ್ಕಿಲ್ಲ. ಆದರೂ ಅವರಿಗೆ ಇಲ್ಲಿಯ ಎಲ್ಲ ಜನರ— ಚಿಕ್ಕ ಊರಿನ— ಪರವಾಗಿ ಒಂದು ವಿನಂತಿಯನ್ನು ತಿಳಿಸಿರಿ. ಅವರಿಗೆ ಹೇಳಿ 'ನಮಗೆ ವಸ್ತ್ರಗಳು ಬೇಕಾಗಿರುತ್ತವೆ.' ಎಂದು.''

''ಅಂದರೆ ತೋಪು ಮತ್ತು ಬಂದೂಕುಗಳಲ್ಲವೆ ?'' ಟಾಮ ಆರ್ಡರ್ಸ್‌ನು ನಡುವೆಯೇ ಕೇಳಿದನು.

''ಅಲ್ಲಿ ಅಂಥ ದೊಡ್ಡ ಆಯುಧಗಳ ಉಪಯೋಗವನ್ನು ಇವತ್ತಿನ ಮಿತಿಗೆ ನಮಗೆ ಉಪಯೋಗ ಮಾಡಿಕೊಳ್ಳಲು ಸಾಧ್ಯ ವಿಲ್ಲ. ಸಹಜವಾಗಿ ಮುಚ್ಚಿ ಉಪಯೋಗಿಸಲು ಬರುವಂತೆ ಚಿಕ್ಕ ಚಿಕ್ಕ ಆಯುಧಗಳು ಬೇಕಾಗಿವೆ ನಮಗೆ. ಸಣ್ಣ ಬಾಂಬ್ಸ, ಡಾಯನಾಮಾಯಿಟ, ಗ್ರೆನೆಡ್ಸ್ ಇಂಥ ಆಯುಧಗಳನ್ನು ಕಳು ಹಿಸಲು ಹೇಳಿರಿ. ಮತ್ತು... ಮತ್ತು ಸಾಧ್ಯವಾದಲ್ಲಿ ವಿಷವನ್ನೂ ಕಳುಹಿಸಿ ಕೊಡಲು ಹೇಳಿರಿ. ಅದರ ಉಪಯೋಗವನ್ನು ಮಾಡಲು ಯಾವ ಅಭ್ಯಂತರವೂ ಇಲ್ಲ! ಇದೇನು ಧರ್ಮ ಯುದ್ಧವಲ್ಲ! ವಿಶ್ವಾಸಘಾತ ಮತ್ತು ನೀತಿರಹಿತ ಅಮಾನುಷ ಅತ್ಯಾಚಾರದ ರಾಕ್ಷಸೀ ಯುದ್ಧವಿದು ! ಯಾವ ಯಾವ ಹೀನ ಉಪಾಯಗಳಿಂದ ಶತ್ರುವು ನಮ್ಮ ದೇಶವನ್ನು ವಶಪಡಿಸಿಕೊಂಡಿ ರುವನೋ ಆ ಎಲ್ಲ ಉಪಾಯಗಳನ್ನು ಶತ್ರುವಿನ ವಿರುದ್ಧ ಉಪ ಯೋಗಿಸಲು ಯಾವ ಅಡ್ಡಿಯೂ ಇಲ್ಲ. ವಿಮಾನಗಳ ಮೂಲಕ

ನಮ್ಮ ಕಡೆಗೆ ಚಿಕ್ಕ ಚಿಕ್ಕ ಬಾಂಬ್ಸಗಳನ್ನು ಕಳುಹಿಸಲು ಬ್ರಿಟಿಷ ಜನರಿಗೆ ತಿಳಿಸಿರಿ. ಅಂದ್ಧರೆ ನಾವು ಸಶಸ್ತ್ರರಾದರೂ ಕೂಡ ಅದರ ಸುಳಿವು ಶತ್ರುವಿಗೆ ಸಿಗಲಾರದು.''

ಅದಕ್ಕೆ ಟಾಮನು ಹೇಳಿದನು. ‘‘ಇಂಗ್ಲಂಡಕ್ಕೆ ನಾವು ಸುರಕ್ಷಿತವಾಗಿ ತಲುಪಿದರೆ, ನೀವು ಹೇಳಿದ ಈ ವಿನಂತಿಯನ್ನು ಅಲ್ಲಿಯ ಜನರಿಗೆ ತಪ್ಪದೆ ತಿಳಿಸುವೆವು. ಆದರೆ, ಆದರೆ, ಇಂಗ್ಲಂಡದಲ್ಲಿಯು ಅಧಿಕಾರಿಗಳು ಸರ್ವಸಾಧಾರಣ ಜನರ ಕೈಯಲ್ಲಿ ಆಯುಧಗಳನ್ನು ಕೊಡಲು ಇನ್ನೂ ಸಿದ್ಧರಿಲ್ಲವೆಂದು ಹೇಳುತ್ತಾರೆ. ಅದಕ್ಕೇನು ಮಾಡುವುದು ?''

''ಅಹುದು. ನಿಜವಿದೆ. ಈ ವಿಷಯದಲ್ಲಿ ನಾನು ವಿಚಾರ ಮಾಡಿದ್ದಿಲ್ಲ. ಆದರೆ ಇಂಗ್ಲಂಡ-ಅಮೇರಿಕೆಗಳಲ್ಲಿ ಇಂಥ ಜನರ ಕೈಯಲ್ಲಿ ಇನ್ನೂ ಅಧಿಕಾರವು ಇದ್ದುದ್ದಾದರೆ, ಜಗತ್ತಿನ ಉಳಿಗಾಲ ವಿಲ್ಲವೆಂದಂತಾಯಿತು ! ಒಂದು ವೇಳೆ ಅವರು ನಿಮ್ಮ ಮಾತನ್ನು ಸಹನಸೀಲತೆಯಿಂದ ಕೇಳಿದರೆ ನಮ್ಮ ವಿನಂತಿಯನ್ನು ಅಷ್ಟು ಮಾತ್ರ ಅವರಿಗೆ ತಿಳಿಸಿರಿ. ನಮಗೆ ಆಯುಧಗಳ ಸಹಾಯೆ ಬೇಕಾಗಿದೆ. ಅದಷ್ಟು ದೊರಕಿತೆಂದರೆ ಮುಂದಿನ ಕೆಲಸವನ್ನು ನಾವು ನೋಡಿಕೊಳ್ಳುವೆವು.''

ಮೇಯರರ ಮಾತು ಮುಗಿದನಂತರ ಆನಿಯು ಸಾವಕಾಶವಾಗಿ ಅವರ ಹತ್ತಿರ ಬಂದು ಹೇಳಿದಳು. ‘‘ಮುಂದಿನ ಮಾರ್ಗದಿಂದ ಯಾವನೊ ಒಬ್ಬ ಸೈನಿಕನು ಬರುತ್ತಿರುವನು. ಇದಕ್ಕೂ ಮೊದಲು ಇಲ್ಲಿಂದ ಹೊರಟು ಹೋದ ಸೈನಿಕನಂತೆ ಕಾಣಿಸುತ್ತಾನೆ ಅವನು. ನೀವು ಬರುವದಕ್ಕಿಂತ ಮೊದಲು ಮಾಲಿಯ ಮನೆಯಲ್ಲಿ ಒಬ್ಬ ಸೈನಿಕನಿದ್ದನು. ನಾನು ಮುಂದಿನ ಬಾಗಿಲಿಗೆ ಬೀಗವನ್ನು ಹಾಕಿರುವೆನು.''

ಆನಿಯ ಈ ಶಬ್ದಗಳನ್ನು ಕೇಳಿ ಎಲ್ಲರಿಗೂ ಆಶ್ಚರ್ಯ ವಾಯಿತು. ಮಾಲಿಯ ಕಡೆಗೆ ಅವರೆಲ್ಲರೂ ಶಂಕಿತ ನೇತ್ರಗಳಿಂದ ನೋಡಹತ್ತಿದರು.

ಅಷ್ಟರಲ್ಲಿಯೇ ಬಾಗಿಲದ ಮೇಲೆ 'ಟಕ್ ಟಕ್' ಎಂದು ಬಡಿದಂತೆ ಸಪ್ಪಳವಾಯಿತು. ಮೇಯರ ಆರ್ಡೆನರು ಮಾಲಿಯ ಹತ್ತಿರ ಬಂದು ಕೇಳಿದರು. "ಮಾಲೀ ಆನಿಯು ಏನು ಹೇಳುತ್ತಿರುವಳು ಇದನ್ನು? ನೀವು ಯಾವುದಾದರೂ ಸಂಚಿನಲ್ಲಿ ಸಿಲುಕಿಲ್ಲವಷ್ಟೆ?''

'ಇಲ್ಲ" ಮಾಲಿಯು ಉತ್ತರ ಕೊಟ್ಟಳು. "ಆದರೆ ನೀವೆಲ್ಲರೂ ಹಿಂದಿನ ಬಾಗಿಲಿನಿಂದ ಹೊರಗೆ ಹೋಗಿರಿ. ಕೂಡಲೇ ಹೊರಡಿರಿ; ಏಳಿರಿ!"

"ಆದರೆ ಮಾಲೀ, ನಿನಗೇನಾದರೂ ಸಂಕಟ ಬಂದರೆ, ನಿನಗೆ ಸಹಾಯ ... ''

"ಬೇಡ. ನೀವು ಮೊದಲು ಹೊರಗೆ ಹೋಗಿರಿ. ನನ್ನ ಮೇಲೆ ಬರಬಹುದಾದ ಈ ಸಂಕಟದಲ್ಲಿ ಯಾರೂ ನನಗೆ ಸಹಾಯ ಮಾಡಲು ಸಾಧ್ಯವಿಲ್ಲ! ಆದರ ನೀವು ಮೊದಲು ಇಲ್ಲಿಂದ ಹೊರಗೆ ಹೋಗಿರಿ.''

ಎಲ್ಲರೂ ಹೊರಗೆ ಹೋದನಂತರ ಮಾಲಿಯು ಹಿಂದಿನ ಬಾಗಿಲ ವನ್ನು ಮುಚ್ಚಿದಳು. ಕೋಣೆಯ ಮಧ್ಯಭಾಗದಲ್ಲಿ ಇಟ್ಟ ದೀಪದ ಹತ್ತರ ಸ್ವಲ್ಪ ಹೊತ್ತು ವಿಚಾರ ಮಾಡುತ್ತ ನಿಂತಳು. ಅಲ್ಲಿ ಹೊಲಿಗೆಗೆ ಬೇಕಾದ ಸಾಮಾನುಗಳೂ ದೊಡ್ಡ ಕತ್ತರಿಯು ಬಿದ್ದಿದ್ದವು. ಅಲ್ಲಿಯ ಕತ್ತರಿಯನ್ನು ಎತ್ತಿಕೊಂಡು ಅದನ್ನು ದೊಡ್ಡ ಚೂರಿಯಂತೆ ತನ್ನ ಮುಷ್ಟಿಯಲ್ಲಿ ಹಿಡಿದು ನೋಡಿದಳು ಮಾಲಿ.

ಹೊರಗೆ ಮತ್ತೆ 'ಟಕ್ ಟಕ್' ಸಪ್ಪಳವಾಯಿತು. ಮಾಲಿಯು ಕೈಯಲ್ಲಿಯ ಕತ್ತರಿಯನ್ನು ಕೂಡಲೆ ತನ್ನ ಮೈಮೇಲಿನ ಅರಿವೆಯಲ್ಲಿ ಬಚ್ಚಿಟ್ಟಳು. ಬಾಗಿಲ ಕಡೆಗೆ ಹೋಗಹೋಗುತ್ತ ಹೇಳಿದಳು. "ಬಂದೆ, ಬಂದೆ ಲೆಫ್ಟನಂಟ ಸಾಹೇಬರೆ!"

ಈ ಘಟನೆಯ ನಂತರ ಲೆಫ್ಟನಂಟ ಟಾಡರರು ಪುನಃ ಯಾರ ದೃಷ್ಟಿಗೂ ಬೀಳಲಿಲ್ಲ!

[ ೭ ]

ಆಕಾಶವು ಶುಭ್ರವಾಗಿತ್ತು. ಸ್ವಲ್ಪ ಸ್ವಲ್ಪ ಚಂದ್ರಕಿರಣಗಳೂ ಕಾಣಿಸುತ್ತಿದ್ದುವು. ಆದರೆ ಬೆಳದಿಂಗಳು ಅಸ್ಪಷ್ಟವಿರುವುದರಿಂದ ಕತ್ತಲು ರಾತ್ರಿಯ ಭಾಸವಾಗುತ್ತಿತ್ತು. ಈಗ್ಯೂ ಮೊದಲಿನಂತೆ ಎಲ್ಲ ಕಡೆಗೆ ಬರ್ಫ ಬೀಳುತ್ತಿತ್ತು; ಮತ್ತು ಆ ಬರ್ಫಾಚ್ಛಾದಿತ ಪ್ರದೇಶದ ಮೇಲಿಂದ ತಣ್ಣನ್ನಗಾಳಿಯು ಮಂದಗತಿಯಿಂದ ಬೀಸುತ್ತಿತ್ತು.

ಕಲ್ಲಿದ್ದಲ್ಲಿ ಖಣಿಯ ಪ್ರವೇಶದ್ವಾರದ ಹತ್ತಿರ ಶತ್ರು ಸೈನಿಕರು ಕಾವಲು ನಡೆಯಿಸಿದ್ದರು. ಇಂಥ ಅನುಕೂಲ ರಾತ್ರಿಯಲ್ಲಿ ಬಹುಶಃ ಬಾಂಬುಗಳನ್ನು ಚೆಲ್ಲುತ್ತಾರೆಂಬುದು ಅವರಿಗೆ ತಿಳಿದುದರಿಂದ ಕಿವಿಗೆ ಧ್ವನಿ ಲೇಖನ ಯಂತ್ರವನ್ನು ಹಚ್ಚಿಕೊಂಡು ಆಕಾಶದ ಕಡೆಗೆ ನಿರೀಕ್ಷಿಸುತ್ತಿದ್ದರು.

ಬಹಳ ಸಮಯದ ವರೆಗೆ ಅವರಿಗೆ ಮಾರ್ಗ ಪ್ರತೀಕ್ಷೆ ಮಾಡುತ್ತ ಕೂಡಬೇಕಾಗಲಿಲ್ಲ. ಸ್ವಲ್ಪೇ ಸಮಯದಲ್ಲಿ ಬಹಳ ದೂರದಿಂದ ವಿಮಾನಗಳ 'ಘರಘರ' ಸಪ್ಪಳವು ಕೇಳಬರಹತ್ತಿತು. 'ಕ್ಯಾಪ್ಟನ್ ಲಾಫ್ಟರು ಸ್ವಲ್ಪ ಹಿಂದಕ್ಕೆ ಸರಿದು, ಸರಿಯಾಗಿ ಯಂತ್ರವನ್ನು ಕಿವಿಗೆ ಹಚ್ಚಿಕೊಂಡು, ಸಮೀಪದಲ್ಲಿಯೇ ನಿಂತುಕೊಂಡ

ಸಾರ್ಜಂಟನಿಗೆ ಹೇಳಿದರು. "ಬಹುಶಃ ಇಪ್ಪತ್ತೈದು ಸಾವಿರ ಫೂಟಿನ ಎತ್ತರದ ಮೇಲಿರಬೇಕು ವಿಮಾನಗಳು."

"ಅಹುದು." ಸಾರ್ಜಂಟನು ಉತ್ತರ ಕೊಟ್ಟನು. "ಮತ್ತು ಹೆಚ್ಚಾದರೂ ಎಲ್ಲಿವೆ? ಕೇವಲ ಎರಡು ಮೂರ ಇರಲಿಕ್ಕೆ ಸಾಕು."

ಎರಡೇ ಇದ್ದುವು ಆ ಬಾಂಬರ ವಿಮಾನಗಳು. ಸರಿಯಾಗಿ ಊರ ಮಧ್ಯಭಾಗದಲ್ಲಿ ತಲುಪಿದ ನಂತರ ವಿಮಾನಗಳ ಗತಿಯು ಮಂದವಾಯಿತು; ಮತ್ತು ದುಂಡಗೆ ಸುತ್ತುವರೆಯುತ್ತ ಭೂಮಿಯ ಸಮೀಪಕ್ಕೆ ಬರಹತ್ತಿದುವು.

ಆ ನಂತರ ಅಜಾನಕವಾಗಿ ಅವುಗಳ ಹೊಟ್ಟೆಯೊಳಗಿಂದ ಒಂದರ ಹಿಂದೆ ಒಂದರಂತೆ ಸಾವಿರಾರು ಚಿಕ್ಕ ಚಿಕ್ಕ ವಸ್ತುಗಳು ಹೊರಬಿದ್ದುವು ಸ್ವಲ್ಪ ಸಮಯದಲ್ಲಿಯೇ ಪ್ರತಿಯೊಂದು ವಸ್ತುವಿನ ಹತ್ತಿರ ಒಂದು ಕೆಂಪು ಬಂಣದ ಪ್ಯಾರಾಶೂಟ ತೆರೆಯಲ್ಪಟ್ಟು, ಆ ವಸ್ತುಗಳನ್ನು ಸಾವಕಾಶವಾಗಿ ಭೂಮಿಗೆ ತಂದು ಮುಟ್ಟಿಸಹತ್ತಿದುವು. ಆ ವಸ್ತುಗಳೆಂದರೆ ಚಿಕ್ಕ ಚಿಕ್ಕ ಡಾಯನಾಮಾಯಿಟಗಳಿದ್ದವು!

ಪ್ಯಾರಾಶೂಟಗಳಿಗೆ ಕಟ್ಟಿ ಯಾವಾಗ ಆ ಚಿಕ್ಕ ಚಿಕ್ಕ ವಸ್ತುಗಳನ್ನು ಚೆಲ್ಲಲಾಯಿತೋ ಆಗ ಗಾಳಿಯು ಬಲವಾಗಿ ಬೀಸಹತ್ತಿತ್ತು. ಆದ್ದರಿಂದ ಅವು ಒಂದೇ ಸ್ಥಳದಲ್ಲಿ ಗುಂಪಾಗಿ ಬೀಳದೆ ಹೋಲ, ಗಿಡ, ಅಡಿವೆ, ಮನೆ, ಬೈಲು, ಕಾರಖಾನೆ ಮೊದಲಾದ ಎಲ್ಲ ಸ್ಥಳಗಳಲ್ಲಿಯೂ ಬಂದು ಬಿದ್ದವು.

ಮುಂಜಾನೆ ಮನೆಯಿಂದ ಕೆಲಸಕ್ಕೆ ಹೊರಟ ಜನರಿಗೆ ಬರ್ಫದ ಮೇಲೆ ಬಿದ್ದ ಕೆಂಪು ಬಣ್ಣದ ಪ್ಯಾರಾಶೂಟಗಳು ಎಲ್ಲೆಲ್ಲಿಯೂ ಕಂಡುವು. ಸಮೀಪ ಹೋಗಿ ಪ್ಯಾರಾಶೂಟಗಳನ್ನು ಬಿಡಿಗೆ ಒಳಗೆ ಕಟ್ಟಿದ ವಸ್ತುವನ್ನು ನೋಡಿದರು; ಮತ್ತು ಅದಕ್ಕೆ ಹೊಂದಿಯೇ

ಇಡಲಾದ ಮುದ್ರಿತ ಪತ್ರವನ್ನೂ ಓದಿಕೊಂಡರು. ಆಗ ಮಾತ್ರ ಅವರು ಅವಸರದಿಂದ ಆ ವಸ್ತುವನ್ನು ಕಿಸೆಯಲ್ಲಿ ಹಾಕಿಕೊಂಡು ಮುಂದೆ ಹೋಗಿ ಗುಪ್ತಸ್ಥಳದಲ್ಲಿ ಮುಚ್ಚಿಟ್ಟರು.

ಯಾವಾಗ ಆ ವಸ್ತುವಿನ ಜೊತೆಗೆ ಚಾಕಲೆಟ್‌ದ ವಡಿಗಳನ್ನು ಸುತ್ತಲಾಗಿದೆ ಎಂಬ ಸಂಗತಿಯು ಊರಲ್ಲಿಯ ಚಿಕ್ಕ ಹುಡುಗರಿಗೆ ತಿಳಿಯಿತೊ ಆಗ ಅವರ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಎಲ್ಲ ಹುಡುಗರೂ ಗುಂಪು ಕಟ್ಟಿಕೊಂಡು ಚಾಕಲೆಟ್‌ದ ಶೋಧಕ್ಕಾಗಿ ಮನೆಬಿಟ್ಟು ಹೊರಗೆ ಹೊರಟರು. ಯಾವ ಸ್ವಲ್ಪ ಹುಡುಗರಿಗೆ ಉಳಿದ ಕೆಂಪು ಬಂಣದ ಪ್ಯಾರಾಶೂಟಗಳು ಕಂಡವೊ ಆಗ ಅವರು ಅವುಗಳನ್ನು ಕೂಡಲೇ ಎತ್ತಿಕೊಂಡರು. ಅವರು ಚಾಕಲೆಟನ್ನು ತಿಂದು ಅದರ ಜೊತೆಗಿದ್ದ ವಸ್ತುವನ್ನು ಮನೆಗೆ ಬಂದು ತಂದೆ–ತಾಯಿಗಳಿಗೆ ಕೊಟ್ಟರು. ತಮ್ಮ ಮಕ್ಕಳು ಮನೆಗೆ ತಂದ ಈ ಡಾಯನಾಮಾಯಿಟವನ್ನು ಕಂಡ ಕೆಲವು ಪಾಲಕರು ಭಯಭೀತರಾದರು; ಮತ್ತು ಅವುಗಳನ್ನು ಅವರು ಶತ್ರು ಸೈನಿಕರಿಗೆ ಮರಳಿ ಕೊಟ್ಟರು. ಆದರೆ ಇಂಥ ಅಂಜುಬುರುಕರ ಸಂಖ್ಯೆ ಬಹಳ ಕಡಿಮೆ ಇತ್ತು. ಬಹಳ ಜನರು ಅವನ್ನು ಗುಪ್ತಸ್ಥಳದಲ್ಲಿ ಬಚ್ಚಿಟ್ಟರು.

ಮೇಯರ ಆರ್ಡೆನರ ಬಂಗ್ಲೆಯ ದಿವಾನಖಾನೆಯಲ್ಲಿ ಕ್ಯಾಪ್ಟನ್ ಲಾಫ್ಟ ಮತ್ತು ಕರ್ನಲ್ ಲಾನ್ಸರರು ರಾತ್ರಿ ಒಗೆಯಲ್ಪಟ್ಟ ಆ ಚಿಕ್ಕ ಚಿಕ್ಕ ವಸ್ತುವಿನ ವಿಷಯವಾಗಿ ಚರ್ಚೆ ಮಾಡುತ್ತಿದ್ದರು. ಲಾನ್ಸರರು ಕೇಳಿದರು, “ಕ್ಯಾಪ್ಟನ್, ಯಾವ ವಸ್ತುವಿದೆ ಇದು ? ಶೋಧಿಸಿ ನೋಡಿದಿರೇನು ನೀವು ?”

“ಇನ್ನೂ ಇಲ್ಲ. ಆದರೆ, ಕರ್ನಲ್ ಸಾಹೇಬ, ರೇಲ್ವೆ ಹಳಿಯು ಕೇವಲ ಹತ್ತು ಮೈಲಿನ ಅಂತರದಲ್ಲಿ ನಾಲ್ಕು ಸ್ಥಳಗಳಲ್ಲಿ ಕಿತ್ತೊಗೆಯಲಾಗಿದೆ.”

‘ ಸದ್ಯ ಅದು ಹೋಗಲಿ. ಮೊದಲು ನೀವು ಈ ವಸ್ತುವನ್ನು ಶೋಧಿಸಿ ನೋಡಿರಿ.’’

ಕ್ಯಾಪ್ಟನ್ ಲಾಫ್ಟರು ಟೇಬಲದ ಮೇಲಿಟ್ಟ ನಿನ್ನೆ ರಾತ್ರಿ ಒಗೆಯಲ್ಪಟ್ಟ ಒಂದು ವಸ್ತುವನ್ನು ಎತ್ತಿಕೊಂಡು, ಸ್ವಲ್ಪ ಸಮಯ ದಿಟ್ಟಿಸಿನೋಡಿ ಹೇಳಿದರು. “ಡಾಯನಾಮಾಯಿಟದ ಕಡ್ಡಿ ಇದು ಕರ್ನಲ್, ಕ್ಯಾಪ, ಫ್ಯೂಜ್ ಎಲ್ಲವೂ ಸರಿಯಾಗಿದೆ. ಫ್ಯೂಜ್ ಹೊತ್ತಿಸಿದ ಒಂದು ನಿಮಿಷದಲ್ಲಿ ಇದರ ಸ್ಫೋಟವಾಗುತ್ತದೆ. ಇಂಥ ಚಿಕ್ಕ ಡಾಯನಾಮಾಯಿಟಗಳು ಉಪಯೋಗಿಸಲು ಬಹಳ ಸುಲಭವಿರುತ್ತವೆ. ಮತ್ತು ಅದರ ಸುತ್ತಲೂ ಚಾಕಲೇಟ್‌ಗಳೂ ಇವೆ ’’

“ಚಾಕಲೇಟ್ ಹಾಳಾಗಲಿ. ಅದರ ಸತ್ತಲೂ ಸುತ್ತಿದ ಆ ಮುದ್ರಿತ ಕಾಗದದಲ್ಲಿ ಏನು ಬರೆದಿದೆ?’’

ಕ್ಯಾಪ್ಟನ್ ಲಾಫ್ಟರು ಓದಲು ಪ್ರಾರಂಭಿಸಿದರು. “ಇದನ್ನು ಮುಚ್ಚಿಡಿರಿ. ನಿಮ್ಮ ಮಿತ್ರರು ನಿಮಗೆ ಈ ಬಹುಮಾನವನ್ನು ಕಳುಹಿಸಿರುವರು ನಿಮ್ಮ ದೇಶದ ಮೇಲೆ ದಾಳಿಮಾಡುವ ಶತ್ರು ಸೈನಿಕರಿಗೆ ಇದರ ಕಾಣಿಕೆ ಕೊಡಿರಿ! ಇದರ ಸಹಾಯದಿಂದ ದೊಡ್ಡ ಅಪಘಾತಗಳನ್ನು ಉಂಟು ಮಾಡುವ ಪ್ರಯತ್ನ ಮಾಡಬೇಡಿ.” ಮುಂದೆ ಆವರು ಅವಸರವಾಗಿ ಅಕ್ಷರಗಳ ಮೇಲಿಂದ ತಮ್ಮ ದೃಷ್ಟಿಯನ್ನು ಚಲಿಸಹತ್ತಿದರು. “ರೇಲ್ವೆ ಹಳಿ........’’, “ರಾತ್ರಿಯ ಸಮಯದಲ್ಲಿ ಇದನ್ನು ಮಾಡಿಸಿ ,” “... ಸಾರಿಗೆ ವಾಹನವನ್ನು ಪ್ರತಿಬಿಂಧಿಸಿರಿ....’’

“ಸೂಚನೆ— ಯಾವಸ್ಥಳದಲ್ಲಿ ಎರಡು ರೇಲ್ವೆ ಹಳಿಗಳನ್ನು ಕೂಡ್ರಿಸಿರುತ್ತಾರೊ ಆ ಬಿರುಕಿನಲ್ಲಿ ಡಾಯನಾಮಾಯಿಟವನ್ನು ಇಟ್ಟು ಬಿಗಿಯಾಗಿ ದಾರದಿಂದ ಕಟ್ಟಬಿಡಿರಿ; ಇಲ್ಲವೆ ಬರ್ಫದಿಂದ

ಪೂರ್ಣ ಮುಚ್ಚಿಬಿಡಿರಿ. ಇದರಿಂದ ಅದು ತನ್ನ ಸ್ಥಳದಿಂದ ಚಲಿಸಲಾರದು. ಫ್ಯೂಜ್ ಹೊತ್ತಿಸಿದ ನಂತರ ಐವತ್ತು ಅಂಕೆಗಳನ್ನು ಎಣಿಸುವುದರೊಳಗೆ ಅದರ ಸ್ಫೋಟವಾಗುವುದು. ಪೂಲುಗಳನ್ನು ಸಂಪೂರ್ಣವಾಗಿ ಹಾರಿಸದೆ, ಅಲ್ಲಲ್ಲಿ ಬಿರುಕುಗಳನ್ನು ಉಂಟುಮಾಡಿರಿ. ಸಾರಿಗೆಯ ಮೋಟಾರ ಗಾಡಿಗಳು.... ಅದರಂತೆ ಇತರ ವಾಹನಗಳು ಮತ್ತು ಟೆಲಿಫೋನ-ಟೆಲಿಗ್ರಾಫ ಕಂಬಗಳು.''

ಮುದ್ರಿತ ಪತ್ರವನ್ನು ಓದಿ ಮುಗಿಸಿದ ನಂತರ ಕರ್ನಲ್ ಲಾನ್ಸರರು ಲಾಫ್ಟರಿಗೆ ಹೇಳಿದರು. ''ಕ್ಯಾಪ್ಟನ್ ಇಂದು ಡಾಯನಾಮಾಯಿಟದ ಕಡ್ಡಿಗಳು ಬಂದುವು. ನಾಳೆ ವಿಷವನ್ನು ಕೂಡ ಚೆಲ್ಲಲು ಹಿಂದು ಮುಂದೆ ನೋಡಲಾರರು ಈ ಜನರು.''

''ಆದರೆ, ವಿಷವನ್ನು ಎಲ್ಲಿ ಚೆಲ್ಲುವೆವೆಂದು ಹೇಳಿರುವರು ಅವರು ಇದರಲ್ಲಿ.''

''ಇನ್ನೂ ಹೇಳಿಲ್ಲ. ಆದರೆ ತೀವ್ರದಲ್ಲಿಯೇ ಚೆಲ್ಲಬಹುದು. ನಿಜವಾಗಿಯೂ ಶತ್ರುಗಳು ವಿಷವನ್ನು ಚೆಲ್ಲಿದರೆ, ನಮ್ಮ ಸೈನಿಕರ ಧೈರ್ಯವು ಎಷ್ಟು ಕಡಿಮೆಯಾಗುವುದೆಂಬುದರ ಕಲ್ಪನೆ ಇದೆಯೆ ನಿಮಗೆ? ನಿಃಸಂಕೋಚ ಮನಸ್ಸಿನಿಂದ ಊಟ ಮಾಡುವ ಇಲ್ಲವೆ ಕೇವಲ ನೀರನ್ನಾದರೂ ಕುಡಿಯುವ ಎದೆಗಾರಿಕೆಯು ಅವರಲ್ಲಿ ಉಳಿಯುವುದೇನು?''

''ಕರ್ನಲ್ ಸಾಹೇಬ, ಮಾತನಾಡುತ್ತ ಕೂಡ್ರುವ ಸಮಯವಲ್ಲ ಇದು. ಈಗಿಂದೀಗಲೇ ಡಾಯನಾಮಾಯಿಟದ ಕಡ್ಡಿಗಳ ಶೋಧ ಮಾಡುವ ವ್ಯವಸ್ಥೆಯನ್ನು ಮಾಡಲೇ ಬೇಕು.''

''ಅವಶ್ಯ. ಶೋಧವನ್ನಂತೂ ಮಾಡಲೇಬೇಕು. ಲೆಫ್ಟನಂಟ ಪ್ರಕಲ್ ಮತ್ತು ನೀವು ಕೂಡಿ ಇದೇ ಕೆಲಸಕ್ಕೆ ಪ್ರಾರಂಭಿಸಿರಿ ಈಗ. ನನ್ನ ಕೈಕೆಳಗೆ ಮತ್ತೆ ಕೆಲವು ಜನ ಅಧಿಕಾರಿಗಳಿದ್ದರೆ

ಬಹಳ ಅನುಕೂಲವಾಗುತ್ತಿತ್ತು. ಟಾಡರರ ಮರಣದಿಂದ ಬಹಳ ತೊಂದರೆಯಾಗ ಹತ್ತಿರುವುದು ನನಗೆ. ಹೆಂಗಸರ ಗೊಂದಲ ದಲ್ಲಿ ಬೀಳದಿದ್ದರೆ ಏನು ಕೆಡುತ್ತಿತ್ತು ಅವನದು?''

''ಕರ್ನಲ್. ಲೆಫ್ಟನಂಟ ಪ್ರಕಲ್‌ನ ಸದ್ಯದ ನಡವಳಿಕೆಯು ನನಗೆ ಅಷ್ಟೊಂದು ಸರಿಯಾಗಿ ಇಲ್ಲ. ಇತ್ತಿತ್ತಲಾಗಿ ಅವನ ಮುಖದ ಮೇಲೆ ಯಾವಾಗಲೂ ನಿರಾಶೆಯು ಮೋಡವು ಕವಿದಿರುತ್ತದೆ.''

''ನನಗೆ ಗೊತ್ತಿದೆ ಅದು. ಅವನನ್ನು ಸಂಭಾಳಿಸಿಕೊಳ್ಳಿರಿ ನೀವು. ಒಳ್ಳೇದು, ಶೋಧದ ಕೆಲಸಕ್ಕೆ ಪ್ರಾರಂಭಿಸಿರಿ. ಇದು ನೋಡಿ, ಎಲ್ಲಿಯ ವರೆಗೆ ಜನರು ಬಹಿರಂಗವಾಗಿ ಅತ್ಯಾಚಾರವನ್ನು ಮಾಡುವುದಿಲ್ಲವೊ ಅಲ್ಲಿಯ ವರೆಗೆ ನಿಷ್ಕಾರಣವಾಗಿ ಗುಂಡಿಕ್ಕಿ ಜನರನ್ನು ಕೊಲ್ಲಬೇಡಿ.''

''ಎಸ್ ಸರ್'' ಎಂದು ಕ್ಯಾಪ್ಟನ್ ಲಾಫ್ಟರು ಹೊರಗೆ ಹೊರಟು ಹೋದರು

ಆನಂತರ ಮೇಜರ ಹಂಟರರ ಕಡೆಗೆ ಹೊರಳಿ ಕರ್ನಲ್ ಲಾನ್ಸರರು ಹೇಳಿದರು, ''ಮೇಜರ, ರೇಲ್ವೆ ಲಾಯಿನದ ರಿಪೇರಿಯ ಕೆಲಸಕ್ಕೆ ಪ್ರಾರಂಭಿಸಿರಿ ನೀವು. ನಿಮ್ಮ ಕೆಲಸ ಮತ್ತು ತೊಂದರೆಗಳು ಇಂದಿನಿಂದ— ಇವತ್ತಿನ ರಾತ್ರಿಯಿಂದ ಬಹಳೇ ಬೆಳೆಯುವವು. ಯಾಕಂದರೆ ಇನ್ನು ಮುಂದೆ ನಿಜವಾದ ದೊಡ್ಡ ದೊಡ್ಡ ಅಪಘಾತಗಳು ಘಟಿಸುವವು.''

''ನಿಜವಿದೆ ನಿಮ್ಮ ಹೇಳಿಕೆಯು. ಈ ವಿಷಯವಾಗಿ ರಾಜಧಾನಿ ಯಿಂದ ಏನಾದರೂ ಅಪ್ಪಣೆ ಬಂದಿದೆಯೇ?''

''ಅಹುದು. ಅದರ ಸಾರಾಂಶವನ್ನು ನಾನು ನಿಮಗೆ ತಿಳಿಸ ಬೆಯೆ ನೀವು ತಿಳಿದುಕೊಳ್ಳಬಹುದು. 'ಮುಂದಾಳುಗಳಿಗೆ ಮತ್ತು

ಸಂಶಯಸ್ಪದರಾದ ಚಳವಳಿಗಾರರಿಗೆ ಹಿಡಿಯಿರಿ ಮತ್ತು ಗುಂಡಿಕ್ಕಿ ಕೊಲ್ಲಿರಿ!' ಇಲ್ಲಿ ನಮ್ಮ ಬಗ್ಗೆ ಊರಲ್ಲಿಯ ಜನರ ಮನಸ್ಸಿನಲ್ಲಿ ದ್ವೇಷ ಮತ್ತು ಸಂತಾಪವು ಹೇಗೆ ಬೆಳೆಯುತ್ತ ನಡೆದಿವೆ ಎನ್ನುವ ಕಲ್ಪನೆಯಾದರೂ ಅವರಿಗೆ ಇರುವುದೆ?"

ಇಷ್ಟರಲ್ಲಿಯೇ ಬಾಗಿಲು ಕಾಯುತ ಒಬ್ಬ ಸೈನಿಕನು ಒಳಗೆ ಬಂದನು ಮತ್ತು ಲಾನ್ಸರರಿಗೆ ಹೇಳಿದನು "ಮಿ ಕ್ಯಾರೆಲ್ಲರು ನಿಮಗೆ ಭೆಟ್ಟಿಯಾಗಲು ಬಂದಿರುವರು" ಎಂದು.

"ಒಳಗೆ ಕಳುಹಿಸು ಅವರನ್ನು."

ಕೋಣೆಯಲ್ಲಿ ಒಂದು ಕಾಲನ್ನು ಇಡುಇಡುತ್ತಲೆ ಕ್ಯಾರೆಲ್ಲರು ಪ್ರಾರಂಭಿಸಿದರು. "ಕರ್ನಲ್ ಸಾಹೇಬ, ಮೇಯರಆರ್ಡೆನ್‌ರು ಇಲ್ಲಿಯ ಬಂಡುಗಾರರ ಮುಂದಾಳುಗಳಾಗಿರುವರು."

"ಸುಮ್ಮನೆ ಮೂರ್ಖರಂತೆ ಏನಾದರೊಂದನ್ನು ಬಡಬಡಿಸ ಬೇಡಿರಿ. ಅವರು ಬಹಳ ಸರಳ ಮನುಷ್ಯರಿರುವರು."

ಆನಂತರ ಮಿ. ಕ್ಯಾರೆಲ್‌ರು ತಮ್ಮ ಬಕ್ಕಣದೊಳಗಿನ ಒಂದು ಚಿಕ್ಕ ಕರಿಯ ನೋಟ ಬುಕ್ಕನ್ನು ಹೊರಗೆ ತೆಗೆದು ಅದನ್ನು ತಿರುವುತ್ತ ಹೇಳಿದರು. "ಆದರೆ, ಈ ವಿಷಯದಲ್ಲಿ ನಾನು ಎಲ್ಲ ಸಂಗತಿಗಳನ್ನೂ ದೊರಕಿಸಿರುವೆನು. ಕರ್ನಲ್ ಸಾಹೇಬ, ಈ ಊರಲ್ಲಿಯ ಜನರು ಈ ವರೆಗೆ ಯಾವಯಾವ ಅತ್ಯಾಚಾರ ಗಳನ್ನು ಮಾಡಿರುವರೊ ಅವುಗಳಲ್ಲಿ ಪ್ರತಿಯೊಂದಕ್ಕೂ ಮೇಯ ರರ ಸಂಬಂಧವಿದೆ. ಯಾವ ರಾತ್ರಿ ಲೆಫ್ಟನಂಟ ಟಾಡರರ ಕೊಲೆ ಯಾಗಿದೆಯೋ ಅದೇ ರಾತ್ರಿ ಕೊಲೆಯಾದ ಸ್ಥಳದಲ್ಲಿ ಸ್ವತಃ ಮೇಯರರಿದ್ದರು. ಕೊಲೆಮಾಡಿದ ತರುಣ ಸ್ತ್ರೀಯು ಅಲ್ಲಿಂದ ಓಡಿಹೋಗಿ ಮೇಯರರ ಆಪ್ತರ ಮನೆಯಲ್ಲಿ ಇದ್ದಳು. ಆ ಆಪ್ತರ ಮನೆಯನ್ನು ಕೂಡ ನಾನು ಶೋಧಿಸಿದೆ, ಆದರೆ ಅಷ್ಟರಲ್ಲಿ

ಆಕೆಯು ಅಲ್ಲಿಂದ ಹೊರಟು ಹೋಗಿದ್ದಳು. ಯಾವ ಯಾವ ಹೊತ್ತಿನಲ್ಲಿ ಈ ಊರ ಜನರು ಇಲ್ಲಿಂದ ಶತ್ರು ಸೀಮೆಯಲ್ಲಿ ವಾಸಿಸಲು ಹೊರಟು ಹೋಗುತ್ತಿರುವರೋ ಆ ಎಲ್ಲ ಹೊತ್ತಿನಲ್ಲಿ ಸ್ವತಃ ಮೇಯರ್ಧರು ಅವರಿಗೆ ಸಹಾಯ ಮಾಡುತ್ತಿರುವರು. ನಿನ್ನೆ ರಾತ್ರಿ ಡಾಯನಾಮಾಯಿಟದ ಕಡ್ಡಿಗಳನ್ನು ಶತ್ರುಗಳು ವಿಮಾನದ ಮೂಲಕ ಇಲ್ಲಿ ಒಗೆದಿರುವರು. ಅದರಲ್ಲಿಯೂ ಕೂಡ ಮೇಯರ ಕೈವಾಡವಿರಬೇಕೆಂದು ನನಗೆ ಬಲವಾದ ಸಂಶಯ ಬರಹತ್ತಿದೆ.''

"ಈ ಆರೋಪವನ್ನು ನೀವು ಸಿದ್ಧಮಾಡಿ ತೋರಿಸಬಲ್ಲಿರಾ?"

"ಇಲ್ಲ. ಆದರೆ ಮೇಯರ ಆರ್ಡೆನರು ಇಲ್ಲಿಯ ಬಂಡುಗಾರರ ಮುಂದಾಳಿರುವರೆಂಬುದು ನನಗೆ ಸ್ಪಷ್ಟವಾಗಿ ತಿಳಿದಿದೆ.''

''ಹಾಗಾದರೆ ಈ ವಿಷಯದಲ್ಲಿ ನಾವೇನು ಮಾಡಬೇಕೆಂದು ನಿಮ್ಮ ಅಪೇಕ್ಷೆಯಿದೆ?''

''ಅವರ ಮೇಲೆ ಬಹಳ ಕಠೋರ ಉಪಾಯಗಳನ್ನು ಕೈಕೊಳ್ಳ ಬೇಕಾಗುವುದು ನಮಗೆ. 'ಈ ಊರಲ್ಲಿಯ ಶಾಂತತೆಯ ಬಗ್ಗೆ ಮತ್ತು ಜನರ ಸದ್ವರ್ತನದ ಬಗ್ಗೆ ನಾನು ಹೊಣೆಗಾರ ನಿರುತ್ತೇನೆ' ಎಂದು ನೀವು ಮೇಯರ ಕಡೆಯಿಂದ ವಚನವನ್ನು ತೆಗೆದುಕೊಳ್ಳಿರಿ. ಯಾವುದೇ ಕಾರಣದ ಮೂಲಕ ಈ ವಚನವು ಮುರಿಯಲ್ಪಟ್ಟರೆ ಇಲ್ಲವೆ ಇನ್ನು ಮುಂದೆ ಡಾಯನಾಮಾಯಿಟದ ಒಂದೇ ಒಂದು ಫ್ಯೂಜ್ ಹೊತ್ತಿಸಲ್ಪಟ್ಟರೆ ಕೂಡಲೇ ಮೇಯರ ಆರ್ಡೆನರಿಗೆ ದೇಹಾಂತದ ಶಿಕ್ಷೆಯನ್ನು ವಿಧಿಸಬೇಕು!"

''ಆದರೆ, ಮೇಯರರನ್ನು ಗುಂಡಿಕ್ಕಿ ಕೊಂದ ನಂತರವೂ ಜನರ ಅತ್ಯಾಚಾರಗಳು ನಿಲ್ಲದಿದ್ದರೆ?"

''ಅಂದ ಮೇಲೆ ಎರಡನೆಯ ಸರತಿ ಡಾ. ವಿಂಟರರದು. ಅವ ರೇನು ಇಲ್ಲಿ ಅಧಿಕಾರದಲ್ಲಿರದಿದ್ದರೂ ಕೂಡ ಮೇಯರರ ನಂತರ ಊರ ಜನರಲ್ಲಿ ಅವರದೆ ವರ್ಚಸ್ಸು ಹೆಚ್ಚಾಗಿರುತ್ತದೆ."

"ಡಾಕ್ಟರ ವಿಂಟರರನ್ನು ಕೊಂದ ನಂತರ ಮುಂದೇನು ಮಾಡುವುದು?"

"ಮುಂದೆ ನೀವೇ ಈ ಊರ ಅಧಿಕಾರಿಗಳಾಗುವಿರಿ. ಬಂಡನ್ನು ಮುರಿಯುವಿರಿ. ಮುಂದಾಳುಗಳನ್ನು ಇಲ್ಲದ್ಧಂತೆ ಮಾಡಿದ ಕೂಡಲೇ ಬಂಡು ತನ್ನಷ್ಟಕ್ಕೆ ತಾನೇ ನಿಂತುಬಿಡುವುದು !"

"ನಿಮಗೆ ನಿಜವಾಗಿಯೂ ಹೀಗನಿಸುವುದೇ ?"

"ಅದುದು."

ಆನಂತರ ಕರ್ನಲ್ ಲಾನ್ಸರರು ಒಂದು ಪ್ರಕಾರವಾಗಿ ತಮ್ಮ ಕತ್ತನ್ನು ಅಲುಗಾಡಿಸಿದರು. ಅದರ ಮೇಲಿಂದ ಮಿ. ಕ್ಯಾರಲ್‌ರ ಮಾತು ಅವರಿಗೆ ರುಚಿಸಲಿಲ್ಲವೆನ್ನುವುದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು. ಆದರೂ ಕೂಡ ಅವರು ಕಾವಲು ಮಾಡುವ ಸೈನಿಕರನ್ನು ಕರೆದು ಹೇಳಿದರು. "ಮೇಯರರ ಮೇಲೆ ಸರಿಯಾಗಿ ಲಕ್ಷವನ್ನಿಡಲು ಕ್ಯಾಪ್ಟನ್ ಲಾಫ್ಟರಿಗೆ ಹೇಳು ಮತ್ತು ಡಾಕ್ಟರ ವಿಂಟರರಿಗೆ ಈಗಲೇ ನನ್ನ ಕಡೆಗೆ ಕರೆದುಕೊಂಡು ಬಾ."

[೮]

ಮಾರ್ಗದಲ್ಲಿಯ ಕೋಣೆಯಲ್ಲಿ ಮೇಯರ ಆರ್ಡೆನರು ದೃಷ್ಟಿಗೆ ಬಿದ್ದುದರಿಂದ ನಡುವೆಯೆ ಡಾಕ್ಟರ ವಿಂಟರರು ನಿಂತು ಬಿಟ್ಟರು; ಮತ್ತು ಅವರ ರಟ್ಟೆಯನ್ನು ಹಿಡಿದುಕೊಂಡು ಕರ್ನಲ್ ಲಾನ್ಸರರ ಕಡೆಗೆ ಕರೆದುಕೊಂಡು ಹೊರಟ ಸೈನಿಕನೂ ಅವರು ನಿಂತುದರಿಂದ ಅಲ್ಲಿಯೇ ನಿಲ್ಲಬೇಕಾಯಿತು. ಮೇಯರ ಮುಖದ ಕಡೆಗೆ ನೋಡುತ್ತ ಡಾಕ್ಟರ ವಿಂಟರರು ಹೇಳಿದರು: "ನನ್ನನ್ನು ಬಂಧಿಸಲಾಗಿದೆ."

"ಯಾವಾಗಾದರೊಂದು ದಿನ ಆಗುವುದೇ ಇತ್ತು ಅದು. ಆದರೆ, ಇನ್ನು ಮುಂದೆ ಅವರೇನು ಮಾಡುವವರಿರುವರೆಂಬುವು ಮಾತ್ರ ನನಗೆ ತಿಳಿಯಲೊಲ್ಲದು."

ಆ ನಂತರ ಇಬ್ಬರೂ ಮಿತ್ರರು ಎಷ್ಟೋ ಸಮಯದ ವರೆಗೆ ಒಬ್ಬರನ್ನೊಬ್ಬರು ಸುಮ್ಮನೆ ನೋಡುತ್ತ ನಿಂತರು. ಅಷ್ಟರಿಂದಲೆ ಪರಸ್ಪರರ ಮನದಲ್ಲಿ ಎಂಥ ವಿಚಾರಗಳು ನಡೆದಿವೆ ಎಂಬುದನ್ನು ಮಾತನಾಡದಲೆ ತಿಳಿದುಕೊಂಡರು.

ನಂತರ ಡಾಕ್ಟರ ವಿಂಟರರು ಮುಂದೆ ಹೇಳಹತ್ತಿದರು. "ಪ್ರತಿಯೊಂದು ಕೆಲಸವನ್ನು ಅತ್ಯಂತ ಯೋಗ್ಯ ಸಮಯದಲ್ಲಿ ಮಾಡುವ ಜನರಿರುವರು ಇವರು. ಆದರೆ ಅವರ ಕಾಲವು ಈಗ ತೀರುತ್ತ ಬಂದಿದೆ. 'ಒಬ್ಬನೇ ಮನುಷ್ಯನು ಇಡೀ ದೇಶದ— ಜನಾಂಗದ ಭವಿತವ್ಯವನ್ನು ನಿರ್ಣಯಿಸುವ ಪದ್ಧತಿಯು ಅವರ ದೇಶದಲ್ಲಿದೆ. ಒಬ್ಬನೇ ಮುಂದಾಳು ಅವರಿಗೆ ಗೊತ್ತಿದೆ. ಅದರಂತೆ ಬೇರೆ ದೇಶಗಳ ಜನರೂ ತಮ್ಮಂತೆಯೆ ಇರುವರೆಂದು ಅವರು ಭಾವಿಸುವರು. 'ಸಂಕಟದ ಸಮಯದಲ್ಲಿ ನಮ್ಮ ದೇಶದಲ್ಲಿ ನೂರಾರು ಮುಂದಾಳುಗಳು ಹುಟ್ಟುವರು' ಎಂಬ ಕಲ್ಪನೆಯು ಅವರಿಗೆ ಹೇಗೆ ಬರಬೇಕು?"

"ಶಬ್ದಶಃ ಸರಿಯಾಗಿದೆ ನಿಮ್ಮ ಅಭಿಪ್ರಾಯ." ಮೇಯರರು ಉತ್ತರಕೊಟ್ಟರು. "ನಮ್ಮ ಜನರು ಸಾಮಾನ್ಯ ಮತ್ತು ಶಸ್ತ್ರಹೀನರಿದ್ದರೂ ಕೂಡ ಗಾಬರಿಯಾಗಿ ತಮ್ಮ ಧೈರ್ಯವನ್ನು ಎಂದಿಗೂ ಬಿಡಲಾರರು! ದಾಸ್ಯದ ಶೃಂಖಲೆಗಳನ್ನು ತೊಡುವುದು ಅವರಿಗೆ ಎಂದೂ ಗೊತ್ತಿಲ್ಲ."

ಅದೇ ಸಮಯಕ್ಕೆ ಸ್ವತಃ ಕರ್ನಲ್ ಲಾನ್ಸರರು ಅಲ್ಲಿಗೆ ಬಂದರು; ಮತ್ತು ಸಿಟ್ಟಿನಿಂದ ಹೇಳಿದರು: "ಇನ್ನು ಇಂಥ ಮಾತುಗಳು ಬಂದಾಗಲೇಬೇಕು."

"ಅದು ಸಾಧ್ಯವಿಲ್ಲ." ಮೇಯುರರು ನಗುತ್ತ ಹೇಳಿದರು.

"ಮೇಯುರ, ಇಲ್ಲಿಯ ಜನರ ಸಭ್ಯ ಆಚರಣೆಯ ಬಗ್ಗೆ ಜವಾಬ್ದಾರರೆಂದು ನಿಮ್ಮನ್ನು ಬಂಧಿಸಲಾಗಿದೆ. ಇನ್ನು ಮೇಲೆ ಊರಲ್ಲಿ ಏನಾದರೂ ಅತ್ಯಾಚಾರವಾದರೆ ನಿಮಗೆ ನಿಮ್ಮ ಜೀವನದ ಬಲಿ ಕೊಡಬೇಕಾದೀತು!"

"ಆದರೂ ಅದು ಸಿಲ್ಲಲಾರದು. ತಮ್ಮ ಕೆಲಸದಲ್ಲಿ ನನ್ನಿಂದ ಎಡರು ಬರುತ್ತದೆಂಬುದು ಜನರಿಗೆ ತಿಳಿದರೆ ಅವರು ನನ್ನ ತಿರಸ್ಕಾರ ಮಾಡಬಹುದು; ಮತ್ತು ತಮ್ಮ ಕೆಲಸವನ್ನು ಹಾಗೇ ಮುಂದುವರಿಸಬಹುದು."

"ನಿಜವಾಗಿಯೂ ನಿಮಗೆ ಹೀಗೆ ಅನಿಸುವುದೆ? ಡಾಯುನಾಮೂಯಿಟದ ಒಂದು ಸ್ಫೋಟವಾದರೂ ಕೂಡ ತಕ್ಷಣ ಮೇಯುರರನ್ನು ಕೊಲೆಮಾಡಲಾಗುವುದು ಎಂಬುದು ಜನರಿಗೆ ತಿಳಿದರೆ ಅವರು ಮುಂದೇನು ಮಾಡುವರು?"

"ಅದನ್ನು ನನಗೆ ಹೇಳಲು ಬರುವುದಿಲ್ಲ. ನನಗನಿಸುವುದು ಅವರು ಡಾಯುನಾಮೂಯಿಟದ ಫ್ಯೂಜನ್ನು ಹೊತ್ತಿಸಬಹುದು."

"ಹೊತ್ತಿಸಬೇಡಿರೆಂದು ನೀವು ಹೇಳಿದರೂ ಕೂಡ?"

"ಅಹುದು. ಆದರೂ ಕೂಡ ಅವರು ಫ್ಯೂಜನ್ನು ಹೊತ್ತಿಸುವರು. ನಾನು ಹೊತ್ತಿಸಬೇಡಿರೆಂದು ಹೇಳಿದರೆ ಅವರಿಗೆ ಕೆಡಕೆನಿಸದೆ ಇರಲಾರದು."

"ಕೆಡಕೆನಿಸಿದರೂ ಕೂಡ ಅವರು ಫ್ಯೂಜನ್ನು ಹೊತ್ತಿಸುವರೆ?" ಲಾನ್ಸರರು ಮತ್ತೆ ಅದೇ ಪ್ರಶ್ನೆಯನ್ನು ಕೇಳಿದರು.

"ಅಹುದು. ಆದರೆ, ಕರ್ನಲ್, ನನ್ನ ಸಾವು-ಬದುಕುಗಳೆರಡೂ ಸಂಪೂರ್ಣವಾಗಿ ನಿಮ್ಮ ಮನಸ್ಸಿನ ಮೇಲೆ ಅವಲಂಭಿಸಿವೆ ಎಂಬುದು ನಿಮಗೆ ತಿಳಿದೇ ಇದೆ. ಆದರೆ ಎಂಥ ಮರಣವನ್ನು

ಸ್ವೀಕರಿಸಬೇಕೆಂಬುದನ್ನು ನಿರ್ಣಯಿಸುವ ಸ್ವಾತಂತ್ರ್ಯವು ಇನ್ನೂ ನನಗಿದೆ. ಬಡಿದಾಡಬೇಡಿರೆಂದು ಜನರಿಗೆ ಹೇಳಿದರೆ, ಅವರಿಗೆ ಕೆಡಕೆನಿಸುವುದು; ಆದರೆ ಅವರು ಬಡಿದಾಡುವುದನ್ನು ನಿಲ್ಲಿಸಲಾರದು. ಅದರ ವಿರುಷ್ಧ ಬಡಿದಾಡಿರೆಂದು ನಾನು ಹೇಳಿದರೆ ಅವರಿಗೆ ಆನಂದವೆನಿಸುವುದು. ನಾನು ಸ್ವತಃ ವೀರನಿರದಿದ್ದರೂ ಜನರಿಗೆ ಸ್ವಲ್ಪಾದರೂ ವೀರರನ್ನಾಗಿ ಮಾಡುವುದರಿಂದ ನನಗೆ ಒಂದು ಪ್ರಕಾರದ ಸಮಾಧಾನವೆನಿಸುವುದು. ನನ್ನ ಅಂತವು ಹೇಗಾಗುವುದೆಂಬುದು ಈಗ ನಿಶ್ಚಿತವೇ ಆಗಿದೆ. ಅಂದ ಮೇಲೆ ಸಾಯುವಾಗ ಸಹಜವಾಗಿ ದೊರಕಬಹುದಾದ ಸಮಾಧಾನವನ್ನು ಯಾರು ತ್ಯಜಿದಬಲ್ಲರು? ಇದು ನೋಡಿ, ನೀವು ಏನು ಬೇಕಾದದ್ದನ್ನು ಮಾಡಿದರೂ ಊರಲ್ಲಿಯ ಪರಿಸ್ಥಿತಿಯು ಸುಧಾರಿಸಲಾರದು; ಅಲ್ಲದೆ ಕ್ಷಣಕ್ಷಣಕ್ಕೂ ಗಂಭೀರವಾಗುತ್ತ ಹೋಗುವುದು. ಪರಾಭವಗೊಂಡು ನೀವು ಇಲ್ಲಿಂದ ಹೋಗುವಿರೆಂಬುದು ಸತ್ಯವಾದುದೇ ಆಗಿದೆ. ಪರಾಭವಗೊಂಡು ಬಾಳುವ ಬಗ್ಗೆ ನಮ್ಮಲ್ಲಿಯ ಜನರಿಗೆ ಬಹಳ ತಿರಸ್ಕಾರವಿದೆ. ಅಂತೆಯೆ ಅವರು ಎಂದೂ ಪರಾಭವಗೊಳ್ಳಲಾರದು! ಸ್ವಾತಂತ್ರ್ಯಪ್ರಿಯ ಜನಾಂಗವು ಎಂದೂ ತಾನಾಗಿ ಯುದ್ಧ ಹೂಡುವುದಿಲ್ಲ. ಒಮ್ಮೆ ಯುದ್ಧ ಪ್ರಾರಂಭವಾಯಿತೆಂದರೆ ಪರಾಭವವಾದರೂ **ಅಂತಿಮ ವಿಜಯ**ವನ್ನು ದೊರಕಿಸುವ ವರೆಗೆ ಯುದ್ಧಮಾಡುತ್ತಲೆ ಇರುವುದು. ಮುಂದಾಳುಗಳನ್ನು ಕುರಿಗಳಂತೆ ಅನುಸರಿಸುವ ಜನರಿಗೆ ಮಾತ್ರ ಇದು ಸಾಧ್ಯವಾಗಲಾರದು. ಅಂತೆಯೆ ಕುರಿಗಳ ಪ್ರವೃತ್ತಿಯ ಜನರು ಪ್ರಥಮದಾಳಿಯಲ್ಲಿ ಜಯವನ್ನು ದೊರಕಿಸುತ್ತಾರೆ; ಮತ್ತು ಅಂತಿಮ ವಿಜಯ ಮಾತ್ರ ಸ್ವಾತಂತ್ರ್ಯಪ್ರಿಯರಿಗೆ ದೊರೆಯುತ್ತದೆ! ನಾನು ಈಗ ಹೇಳಿದ್ದು ಸತ್ಯವಾದುದೆಂದು ನಿಮಗಾದರೂ ಇನ್ನು ಮುಂದೆ ತಿಳಿಯಬಹುದು.”

ಆದರೆ ಮೇಯರ ಈ ಮಾತುಗಳು ಕರ್ನಲ್ ಲಾನ್ಸರರ ಮೇಲೆ ಯಾವ ಪರಿಣಾಮವನ್ನೂ ಮಾಡಿದಂತೆ ತೋರಲಿಲ್ಲ. ಅವರು ಮೊದಲಿನಂತೆಯೇ ಗಡುತಾಗಿ ಉತ್ತರ ಕೊಟ್ಟರು. "ಅದೇನು ಉಳಿದ ಸಂಗತಿ ನನಗೆ ಗೊತ್ತಿಲ್ಲ. ನನ್ನ ಅಪ್ಪಣೆಯು ಸ್ಪಷ್ಟವಾಗಿದೆ. ನಾನು ನಿಮಗೆ ಹನ್ನೊಂದು ಗಂಟೆಯ ಅವಧಿಯನ್ನು ಕೊಟ್ಟಿದ್ದೆ. ಅದು ಈಗ ಮುಗಿಯುತ್ತ ಬಂದದೆ. ಅದರ ಚಿಂತೆ ನನಗಿಲ್ಲ. ಸಂಶಯಾಸ್ಪದ ಜನರಲ್ಲಿ ಮೊದಲೇ ಕೆಲವರನ್ನು ಬಂಧಿಸಲಾಗಿದೆ ಈಗ, ಇನ್ನು ಮುಂದೆ ಊರಲ್ಲಿ ಎಲ್ಲಿಯಾದರೂ ಅತ್ಯಾಚಾರವು ಘಟಿಸಿದರೆ ಅದರ ಬಗ್ಗೆ ಮೊದಲೇ ಬಂದಿಸಿಟ್ಟ ಜನರಿಗೆ ದೇಹಾಂತದ ಪ್ರಾಯಶ್ಚಿತ್ತವನ್ನು ಅನುಭವಿಸಬೇಕಾಗುವುದು."

"ಅಂದರೆ ನಿಮ್ಮ ಆಜ್ಞೆಯ ಉಪಯೋಗವು ಏನೂ ಆಗುವುದಿಲ್ಲವೆಂಬುದು ತಿಳಿದೂ ತಿಳಿದೂ ನೀವು ಅದನ್ನು ಕಾರ್ಯರೂಪದಲ್ಲಿ ತರುವಿರಾ?" ಡಾಕ್ಟರ ವಿಂಟರರು ನಡುವೆಯೆ ಹೇಳಿದರು.

"ಅಹುದು." ಕರ್ನಲ್ ಲಾನ್ಸರರು ಉತ್ತರ ಕೊಟ್ಟರು. "ನನ್ನ ಆಜ್ಞೆ ಎಷ್ಟೇ ಕಠಿಣವಿದ್ದರೂ ಅದನ್ನು ಕಾರ್ಯರೂಪದಲ್ಲಿ ತರುವೆನು. ಆದರೆ ಮೇಯರ ಸಾಹೇಬ, ಅದಕ್ಕೂ ಪೂರ್ವದಲ್ಲಿ ನೀವು ಇಲ್ಲಿಯ ಜನರನ್ನುದ್ದೇಶಿಸಿ ಒಂದು ಸಾರ್ವಜನಿಕವಾದ ವಿನಂತಿಯನ್ನು ಮಾಡಿಕೊಂಡರೆ ಅನೇಕರ ಪ್ರಾಣ ಉಳಿಸಿದ ಶ್ರೇಯಸ್ಸು ನಿಮಗೆ ದೊರಕುವುದೆಂದು ನನಗೆ ಮನಃಪೂರ್ವಕವಾಗಿ ಅನಿಸುವುದು."

ಆದರೆ ಕರ್ನಲ್ ಲಾನ್ಸರರ ಈ ಭಾಷಣವು ಪೂರ್ಣವಾಗಿತ್ತೋ ಇಲ್ಲವೊ ಅಷ್ಟರಲ್ಲಿ ದೂರ ಅಂತರದ ಮೇಲೆ ಒಂದು ಸ್ಫೋಟವಾಯಿತು. ಮತ್ತು ಅದರ ಪ್ರತಿಧ್ವನಿಯು ಇದುರುಗಿನ ದಿನ್ನೆಗೆ ಅಪ್ಪಳಿಗೆ ಅದು ವಾತಾವರಣದಲ್ಲಿ ಲೀನವಾಯಿತು. ಕಲ್ಲಿದ್ದಲ್ಲಿ

ಖಣಿಯಲ್ಲಿಯ ಯಂತ್ರಗಳು ಕರ್ಣಕರ್ಕಶವಾಗಿ ಕೂಗಿ ಜನರಿಗೆ ಸೂಚನೆಯನ್ನು ಕೊಟ್ಟವು. ಯಂತ್ರಗಳ ಕೂಗು ಮತ್ತು ಸ್ಫೋಟದ ಸಪ್ಪಳ ಕೇಳಿಸುತ್ತಲೆ ಮೇಯರ ಆರ್ಡೆನರು ಕ್ಷಣ ಹೊತ್ತು ಸ್ತಬ್ಧರಾದರು. ಮತ್ತು ಮರುಕ್ಷಣದಲ್ಲಿ ಅವರ ಮುಖದ ಮೇಲೆ ಸಮಾಧಾನದ ಚಿನ್ಹವು ತೋರಹತ್ತಿತು. ಅಷ್ಟರಲ್ಲಿಯೆ ಎರಡನೆಯ ಸ್ಫೋಟವಾಯಿತು. ಮತ್ತು ಮೊದಲಿನಂತೆ ಅದರ ಪ್ರತಿಧ್ವನಿಯು ಹೊರಟು ವಾತಾವರಣದಲ್ಲಿ ಸೇರಿತು. ಎರಡನೆಯ ಸಲವಾದ ಸ್ಫೋಟವು ಮೊದಲನೆಯದಕ್ಕಿಂತ ತೀರ ಸಮೀಪವಾಗಿದ್ದಿತು. ಅಂತೆಯೆ ಅದರ ಸಪ್ಪಳವು ಬಹಳವಾಯಿತು. ಎರಡನೆಯ ಸ್ಫೋಟದ ಸಪ್ಪಳವನ್ನು ಕೇಳಿದ ಕೂಡಲೆ ಕರ್ನಲ್ ಲಾನ್ಸರರು ತಮ್ಮ ಕೋಣೆಗೆ ಹೋದರು. ಮೇಯರ ಆರ್ಡೆನರು ಗಡಿಯಾರದ ಕಡೆಗೆ ನೋಡಿ, ಮೇಯರಪದಸೂಚಕವಾದ ಪದಕವನ್ನು ತಮ್ಮ ಕೊರಳೊಳಗಿಂದ ತೆಗೆದು ಅದನ್ನು ಡಾಕ್ಟರ ವಿಂಟರ ಕೈಯಲ್ಲಿ ಕೊಡುತ್ತ ಕೇಳಿದರು. "ಬೇಟೆಯ ಸಮಾಚಾರವೇನು?"

ಅದಕ್ಕೆ ಡಾಕ್ಟರ ವಿಂಟರರು ಹೀಗೆ ಉತ್ತರ ಕೊಟ್ಟರು: "ಬೇಟೆಯು ಬಲೆಯಲ್ಲಿ ಸಿಲುಕಿದೆ. ಅದು ಅಲ್ಲಿಂದ ಹೊರ ಬೀಳುವ ಹಾಗೆ ಇಲ್ಲ."

* * * *

೧೯೪೦ರಲ್ಲಿ ವಶಪಡಿಸಿಕೊಂಡ ಆ ಊರನ್ನು ೧೯೪೩ರಲ್ಲಿ ತಮ್ಮ ಆಟವು ಸಾಗುವುದಿಲ್ಲವೆಂದು ಕರ್ನಲ್ ಲಾನ್ಸರರು ಅಲ್ಲಿಂದ ಹೊರಬೀಳಬೇಕಾಯಿತು. ಮೊದಲು ಪರಾಭವ ಗೊಂಡರೂ ಅಂತಿಮ ವಿಜಯದಲ್ಲಿ ವಿಶ್ವಾಸವಿಟ್ಟ ಸ್ವಾತಂತ್ರ್ಯ ಪ್ರಿಯರು **ಅಂತಿಮ ವಿಜಯವನ್ನು** ದೊರಕಿಸಿದರು.